

**ಅವಧಾನಿ**— (ಅಗ್ರಹವನ್ನು ಸೂಚಿಸುತ್ತಾ) ಏನೇನು ! ತಮಗಾಗಿ - ತಾವು ಕೊಡುವ ಸಂಭಾವನೆಗಾಗಿ — ಸುಳ್ಳು ಜಾತಕ ಬರೆದು ಕೊಡುವುದೋ ? ಚೆನ್ನಾಗಿದೆ ಸ್ವಾಮಿ — ಬಹಳ ಚೆನ್ನಾಗಿದೆ... ....
.................. .. .... .

(ಪುಟ ೮)

# ಮದುವೆಯೋ ಮನೆಹಾಳೋ?

ಅಥವಾ

# ಮುಪ್ಪಿನ ಮೋಹ

(ಒಂದು ಪ್ರಹಸನ)

ಅ. ನ. ಕೃಷ್ಣರಾಯ

ಆನಂದ್ ಬ್ರದರ್ಸ್
ಬೆಂಗಳೂರು ೨.

# ಮುನ್ನುಡಿ
## (ಎರಡನೆಯ ಮುದ್ರಣ)

---

‘ಮದುವೆಯೋ ಮನೆಹಾಳೋ’ ಪ್ರಹಸನದ ಎರಡನೆಯ ಮುದ್ರಣ ಇಪ್ಪತ್ತೆರಡು ವರ್ಷಗಳ ತರುವಾಯವಾದರೂ ಪ್ರಕಟವಾಗುತ್ತಿರುವುದು ನನಗೆ ಹೆಚ್ಚಿನ ಸಂತೋಷದ ವಿಷಯ. ನಾನು ಸಾಹಿತ್ಯ ರಂಗ ಪ್ರವೇಶಿಸುವುದಕ್ಕೆ ಈ ಪ್ರಹಸನ ಹೆಬ್ಬಾಗಿಲಾಯಿತು. ಇದಕ್ಕೆ ಸಿಕ್ಕಿದ ಪ್ರೋತ್ಸಾಹ ನನ್ನ ಎಲ್ಲ ಸಾಹಿತ್ಯಕೃತಿಗಳ ಅಸ್ತಿಭಾರವಾಯಿತು.

ಈ ಪ್ರಹಸನ ನಾನು ಬರೆದ ಸಂದರ್ಭವನ್ನು ಗೆಳೆಯ ತ. ರಾ. ಸುಬ್ಬರಾಯರು ತಮ್ಮ ‘ಅ. ನ. ಕೃ.’ ಗ್ರಂಥದಲ್ಲಿ ಹೀಗೆ ವಿವರಿಸಿದ್ದಾರೆ.

> “‘ಹಾಗಾದರೆ ಒಂದನ್ನು ನೀನೇ ಬರೆದುಕೊಡು.’
>
> ಯುವಕನನ್ನು ಈ ಮಾತು ಕೇಳಿದವರು ಕನ್ನಡ ರಂಗಭೂಮಿಯ ನಟಸಾರ್ವಭೌಮರಾದ ವರದಾಚಾರ್ಯರು.
>
> ಇವನಿಗೆ ವರದಾಚಾರ್ಯರ ಪರಿಚಯ ಚಿಕ್ಕಂದಿನಿಂದಲೂ ಇತ್ತು. ಮನೆಗೆ ಬಹು ಬಳಕೆಯಾಗಿ ಬಂದು ಹೋಗುವವರಲ್ಲೊಬ್ಬರು, ಅವರು.
>
> ತಂದೆ ನರಸಿಂಗರಾಯರು ಕರ್ನಾಟಕ ರಂಗಭೂಮಿಯ ಸ್ಥಾಪಕರಲ್ಲೊಬ್ಬರು. ವಿದ್ವಾನ್ ವೆಂಕಟಾಚಾರ್ಯರು, ಪೆಟ್ಲೂರ್, ಸುದರ್ಶನಂ ಅಯ್ಯಂಗಾರ್, ಎ. ವಿ. ವರದಾಚಾರ್ಯ ಮೊದಲಾದವರನ್ನು ಜೊತೆಗಟ್ಟುಕೊಂಡು. ನಾಟಕ ಪ್ರದರ್ಶನದ ಒಂದು ‘ಕ್ಲಬ್’ ಸ್ಥಾಪಿಸಿದ್ದರು.
>
> ವರದಾಚಾರ್ಯರನ್ನು ರಂಗಮಂದಿರಕ್ಕೆ ಪ್ರವೇಶ ಮಾಡಿಸಿದವರೂ ನರಸಿಂಗರಾಯರೇ.
>
> ಇವನು ವರದಾಚಾರ್ಯರ ನಾಟಕಗಳನ್ನು ನೋಡಿದ್ದ.

ಅವರ ಅಭಿನಯಕ್ಕೆ ಮಾರುಹೋಗಿದ್ದ ಅವರ ಅಭಿನಯದಷ್ಟೇ ವ್ಯಕ್ತಿತ್ವವೂ ಮನಸೆಳೆದಿತ್ತು.

ಅವರು ಆಡುತ್ತಿದ್ದುದು 'ನಿರುಪಮಾ' 'ಶಕುಂತಲಾ' 'ರತ್ನಾವಳಿ' ನಾಟಕಗಳನ್ನು. ಮೊದಮೊದಲು ಇವೇ ಇವನನ್ನು ಮೋಹಿಸಿದ್ದವು—ಬಾಲ್ಯದಲ್ಲಿ.

ಆದರೆ ಇವನ ಬುದ್ಧಿ ಬಲಿಯುತ್ತಾ, ಯೌವ್ವನದಲ್ಲಿ ಫ್ರೆಂಚ್ ಸಾಹಿತಿಗಳ, ವಿವೇಕಾನಂದ, ತಾರಾನಾಥರ ಪ್ರಭಾವ ಮೂಡಿದಮೇಲೆ-

'ಇದೇನು ಈ ಕಂದಾಚಾರದ ನಾಟಕಗಳನ್ನೇ ಆಡಬೇಕೆ? ರಂಗದಂಥ ಪ್ರಭಾವಶಾಲಿಯಾದ ಸಮಾಜ ಸುಧಾರಣಾ ಸಾಧನ ಶಕ್ತಿ, ಈ ಓಬೀರಾಯನಕಾಲದ ನಾಟಕಗಳ ಅನುವಾದಗಳ ಅಭಿನಯದಲ್ಲೇ ವ್ಯರ್ಥವಾಗಬೇಕೇ? ನಮ್ಮ ಸಮಾಜ, ನಮ್ಮ ಜನರನ್ನು ಬಿಂಬಿಸುವಂಥ ನಾಟಕವನ್ನು ಬರೆಯಿಸಿ, ವರದಾಚಾರ್ಯರಂಥ ನಟರು ಅಭಿನಯಿಸಿದರೆ ಏನಾಗಲಾಗದು? ಅವರೇಕೆ ಅಭಿನಯಿಸಬಾರದು?'

ಏಕೆ ಎಂಬ ಪ್ರಶ್ನೆ ಮನಸ್ಸಿನಲ್ಲಿ ಸುಳಿದಿದ್ದೇ ತಡ, ಮನೆಗೆ ಬಂದ ವರದಾಚಾರ್ಯರನ್ನು ಆ ಪ್ರಶ್ನೆ ಕೇಳಿಯೇ ಬಿಟ್ಟ.

'ಹೀಗೇಕೆ ಮಾಡಬಾರದು ಆಚಾರ್ಯರೇ?'

'ಹಾಗೆ ಮಾಡುವುದಕ್ಕೆ ನನ್ನ ಅಭ್ಯಂತರವೇನೂ ಇಲ್ಲ ಮಗೂ.'

'ಅಭ್ಯಂತರವಿಲ್ಲವಾದರೆ, ಹಾಗೇಕೆ ಮಾಡುತ್ತಿಲ್ಲ?'

'ಎರಡು ಕಾರಣ. ಒಂದು ಸದ್ಯ ಕನ್ನಡದಲ್ಲಿ ಅಂಥ ನಾಟಕಗಳಿಲ್ಲ ಎರಡನೆಯದು—ಬರೆದುಕೊಡಿ, ನಾವು ಅಭಿನಯಿಸುತ್ತೇನೆ ಎಂದು ಕೇಳಿದರೂ ಬರೆದುಕೊಡುವ ಜನರಿಲ್ಲ'

'ಇದೆಲ್ಲಾ ಕುಂಟು ನೆಪ ಆಚಾರ್ಯರೇ'

'ಏಕೋ?'

ಇಂಥ ನಾಟಕಗಳನ್ನು ಅಭಿನಯಿಸುವ ಮನಸ್ಸು, ನಿಮಗಿಲ್ಲ. ಇದ್ದಿದ್ದರೆ ನೀವು ಬರೆದುಕೊಡಿ ಕೊಡಿ ಎಂದರೆ ಯಾರಾದರೂ ಬರೆದು ಕೊಡುತ್ತಿದ್ದರು '

' ನೀನು ತಪ್ಪು ತಿಳಿದುಕೊಂಡಿದೀಯ ಮಗೂ ಯಾರಾದರೂ ಅಂಥ ನಾಟಕ ಬರೆದುಕೊಟ್ಟರೆ, ಸಂತೋಷವಾಗಿ ತೆಗೆದುಕೊಂಡೇನು. ನಮ್ಮ ಜನರ ಬಗ್ಗೆ ನಿನಗಿರುವಷ್ಟು ಅಭಿಮಾನ ನನಗಿಲ್ಲವೇ ? '

' ಇದ್ದರೆ, ಯಾರಾದರೂ ಬರೆದುಕೊಟ್ಟರೆ ಅಭಿನಯಿಸುತ್ತೀರಾ ? '

' ಖಂಡಿತವಾಗಿ ಬರೆದುಕೊಡುವವರು ಯಾರು ? '

' ನಾನೇ ! '

ಆಚಾರ್ಯರು ಚಕಿತರಾದರು. ಇವನ ನಿರ್ಭಯವಾದ, ನಿಶ್ಚಯವಾದ ಉತ್ತರ ಕೇಳಿ ಒಂದು ಗಳಿಗೆ ಅವರ ಬಾಯಿಂದ ಮಾತೇ ಹೊರಡಲಿಲ್ಲ ಅವರ ಕಣ್ಣಲ್ಲಿ ಏಕೋ ನೀರು ತುಂಬಿತು.

' ನೀನು ಬರೆದುಕೊಡುತ್ತೀಯಾ ಮಗೂ '

' ಹೂಂ ನಾನೇ ಬರೆದುಕೊಡುತ್ತೇನೆ ನಾನು ಬರೆದು ಕೊಟ್ಟರೆ ನೀವು ಪಾರ್ಟು ಮಾಡುತ್ತೀರಾ ? '

' ಅದಕ್ಕಿಂತ ಭಾಗ್ಯ ನನಗುಂಟೆ ? ಯಾವಾಗ ಬರೆದು ಕೊಡುತ್ತಿ ? '

' ನಾಳೆ ! '

' ಏನು ನಾಳೆನೇ ? ಹಾಗಾದರೆ ಒಳ್ಳೆ.'

ಅವನ ಹೃದಯದಲ್ಲಿ ಅಪೂರ್ವ ಉತ್ಸಾಹ ತುಂಬಿತ್ತು. ಹೃದಯದಲ್ಲಿ ತುಂಬಿ ತುಳುಕುತ್ತಿದ್ದ ಭಾವನೆಗಳು, ಆಚಾರ್ಯರ ಪ್ರೋತ್ಸಾಹಪರವಾದ ಆಶೀರ್ವಾದದ ಉತ್ತೇಜನದಿಂದ ಉಬ್ಬಿ ಹೊರಹೊಮ್ಮಲಾರಂಭಿಸಿದವು.

ಊಟದ ಚಿಂತೆಯಿಲ್ಲ, ನಿದ್ರೆಯ ಯೋಚನೆಯಿಲ್ಲ. ಹಾಳೆಯ ಮೇಲೆ ಹಾಳೆ ಮುಗಿದು, ರಾತ್ರಿ ದಣಿದ ಮೈ ತೂಗಿ

ಮಲಗುವ ವೇಳೆಗೆ ಮೂರಂಕದ ಸಾಮಾಜಿಕ ನಾಟಕವೊಂದು ಸಿದ್ಧವಾಯಿತು.

ಮಾರನೆಯ ದಿನ ಮನೆಗೆ ಬಂದ ಆಚಾರ್ಯರು ಕೇಳಿದರು

'ನಾಟಕ ಸಿದ್ಧವಾಯಿತೆ?'

'ಓಹೋ. ತಗೋಳಿ'

ಹಸ್ತಪ್ರತಿಯನ್ನು ಆಚಾರ್ಯರ ಕೈಗೆ ಕೊಟ್ಟೆ.

ಹಿಡಿದದ್ದನ್ನು ಬಿಡದೆ ಆಚಾರ್ಯರು ಓದಿ ಮುಗಿಸಿದರು. ಅವರ ಕಣ್ಣಲ್ಲಿ ಕಂಬನಿ ತುಳುಕುತ್ತಿತ್ತು. ಆಚಾರ್ಯರು ನಾಟಕ ಓದಿ ಏನು ಹೇಳುತ್ತಾರೋ ಎಂದು ಇವನು ಕಾತುರನಾಗಿ ನೋಡುತ್ತಿದ್ದ. ಓದಿ ಮುಗಿಸಿದವರೇ ಆಚಾರ್ಯರು ಇವನನ್ನು ಬಿಗಿಯಾಗಿ ತಬ್ಬಿಕೊಂಡು, ತಲೆಯ ಮೇಲೆ ಆನಂದದ ಕಂಬನಿ ಚೆಲ್ಲಿದ್ದರು.

'ಹೇಗಿದೆ ಆಚಾರ್ಯರೇ?'

ಆಚಾರ್ಯರ ಗಂಟಲು ಗದ್ಗದಿತವಾಗಿತ್ತು. ಹಾಗೇ ಹೇಳಿದರು

'ನೋಡು ಮಗು ಸಾಹಿತ್ಯ ಬರೆಯೋಕೆ ಬರದೆ ಹೋದರೂ, ಅದನ್ನು ನಾನು ಬಲ್ಲೆ. ಏನು ಬೇಕಾದ್ದು ಬರೆಯಬಹುದು. ಆದರೆ ನಾಟಕ ಬರೆಯೋದು ಕಷ್ಟ. ಅದನ್ನೇ ನೀನು ಮಾಡಿದೀಯ. ಸಾಹಿತ್ಯ ರಂಗದಲ್ಲಿ ಕೀರ್ತಿಶಾಲಿಯಾಗುತ್ತೀ ಮಗು. ಹೀಗೇ ನಿನ್ನ ಬುದ್ಧಿ ವೃದ್ಧಿಯಾಗಲಿ.'

ಆಚಾರ್ಯರ ಆಶೀರ್ವಾದದ ಮಂತ್ರೋದಕ ಸೇಚನೆಯಿಂದ ಸಾಹಿತಿಯ ಜನನವಾಯಿತು - ೧೯೨೪ ರಲ್ಲಿ. ಆ ನಾಟಕದ ಹೆಸರು: **'ಮದುವೆಯೋ ಮನೆಹಾಳೋ.'"**

ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರು ನನ್ನನ್ನು ಅಂದು ಕೆರಳಿಸದಿದ್ದರೆ ನಾನು ನಾಟಕ ಬರೆಯುತ್ತಿದ್ದೆನೋ ಇಲ್ಲವೋ—ಸಾಹಿತ್ಯರಂಗ ಪ್ರವೇಶಮಾಡುತ್ತಿದ್ದೆನೋ ಇಲ್ಲವೋ! ನನಗಾಗ ಹದಿನಾ-

ರನೆಯ ವಯಸ್ಸಿನ ಸಾಕಷ್ಟು ಇಂಗ್ಲಿಷ, ಫ್ರೆಂಚ್, ಗ್ರೀಕ್ ಮತ್ತು ರಷ್ಯಾ ಸಾಹಿತ್ಯ ಓದಿಕೊಂಡಿದ್ದರೂ ನನ್ನ ಮನಸ್ಸು ವೈಜ್ಞಾನಿಕ ಸಂಶೋಧನೆಗಳ ಕಡೆಗೆ ಹರಿಯುತ್ತಿತ್ತು ಆದರೆ ವರದಾಚಾರ್ಯರ ಕಲೆಯ ಇಂದ್ರಜಾಲದಿಂದ ಸಾಹಿತ್ಯದ ಕಡೆ ತಿರುಗಿತು

“ಮದುವೆಯೋ–ಮನೆಹಾಳೋ” ಪ್ರಹಸನವನ್ನು ವರದಾಚಾರ್ಯರು ಮೆಚ್ಚಿಕೊಂಡರೂ ಅದನ್ನು ಅವರು ಪ್ರದರ್ಶಿಸಲು ಸಾಧ್ಯವಾಗಲಿಲ್ಲ ಆಗ ನಾನು ಬರೆದಿದ್ದ ಪ್ರಹಸನ ಒಂದು ಗಂಟೆ ಅವಧಿಯಲ್ಲಿ ಮುಗಿಯುತ್ತಿತ್ತು ನಾಟ್ಯೋಪಜೀವಿ ಸಂಘಗಳಿಗೆ ನಾಲ್ಕುಗಂಟೆ ಕಾಲ ಹಿಡಿಯುವ ನಾಟಕಗಳೇ ಬೇಕಾಗಿದ್ದವು

ಆಗ ನಾಟಕ ಪ್ರಕಟಿಸುವ ಮಾತು ಕನಸಿನ ಮಾತಾಗಿತ್ತು ಆಡಿಸಬೇಕೆಂದು ತವಕಪಡುತ್ತಿದ್ದ. ಅಮೆಚೂರ್ ನಾಟಕ ಮಂಡಳಿಯ ಯಾವುದೋ ಒಂದು ಉತ್ಸವ ಸಂದರ್ಭದಲ್ಲಿ ಆಡಿಸುವ ಅವಕಾಶ ಸಿಕ್ಕಿತು ಮಂಡಳಿಯ ನುರಿತ ನಟರಾದ ಎಂ. ಎಲ್ ಶ್ರೀನಿವಾಸ ಶಾಸ್ತ್ರಿ, ಬಾಲಗಂಗಾಧರ, ಪಿ ದ್ವಾರಕಾನಾಥ್ ಮೊದಲಾದ ಗೆಳೆಯರು ಸಹಕರಿಸಿ ನಾಟಕ ಯಶಸ್ವಿಯಾಗುವಂತೆ ಮಾಡಿದರು ‘ಮದುವೆಯೋ–ಮನೆಹಾಳೋ’ ನಾಟಕಕ್ಕೆ ಶುಕ್ರದೆಸೆ ಬಂತು. ಮೇಲಿಂದ ಮೇಲೆ ಅದನ್ನು ಹಲವು ನಾಟ್ಯವಿಲಾಸಿ ಸಂಸ್ಥೆಗಳವರು ಆಡಿದರು

ಕೆಲವು ವರ್ಷಗಳನಂತರ ನಾಟಕವನ್ನು ಪ್ರಕಟಿಸಬೇಕೆಂಬ ಆಕಾಂಕ್ಷೆ ನನ್ನಲ್ಲಿ ಬಲವಾಗಿ ಮೂಡಿತು ಹಸ್ತಪ್ರತಿಯನ್ನು ವಾಸ್ಯ ಮಿತ್ರರಾದ ಸಿ ಕೆ ವೆಂಕಟರಾಮಯ್ಯನವರ ಕೈಗಿತ್ತು ಅವರ ಅಭಿಪ್ರಾಯ ಕೇಳಿದೆ. ಶ್ರೀಯುತರು ನಾಟಕವನ್ನು ಕೂಲಂಕಷವಾಗಿ ಓದಿನೋಡಿ. ಅಲ್ಲಲ್ಲಿ ತಿದ್ದಿ, ಅನೇಕ ಉಪಯುಕ್ತ ಸಲಹೆಗಳನ್ನಿತ್ತು, ಸೊಗಸಾದ ಮುನ್ನುಡಿಯನ್ನು ಬರೆದಿತ್ತು ಪ್ರೋತ್ಸಾಹಿಸಿದರು ಅದೇ ಕಾಲಕ್ಕೆ ತುಂಗಭದ್ರಾಶ್ರಮಕ್ಕೆ ಹೋಗಿದ್ದಾಗ ನಾನು ಪಂಡಿತ ತಾರಾನಾಥಜೀಯವರಿಗೆ ಹಸ್ತಪ್ರತಿ ತೋರಿಸಿದೆ ಅವರೂ ನಾಟಕವನ್ನು ಮೆಚ್ಚಿಕೊಂಡು ನನ್ನ ಪ್ರಾರ್ಥನೆಯನ್ನು ಮನ್ನಿಸಿ ಒಂದು ವಿಚಾರಪೂರಿತ ಮುನ್ನುಡಿಯನ್ನು ಬರೆದಿತ್ತರು

ನಾಟಕವನ್ನು ಎಲ್ಲಿ, ಹೇಗೆ ಪ್ರಕಟಿಸಬೇಕೆಂದು ನಾನು ವಿಚಾರ ಮಾಡುತ್ತಿದ್ದಾಗ ಮಾನ್ಯ ಹಿರಿಯರಾದ ಡಿ ಪಿ ಅಯ್ಯನವರು ಹಸ್ತ ಪ್ರತಿಯನ್ನು ನನ್ನಿಂದ ತೆಗೆದುಕೊಂಡು ಕ್ರಮಾಗತವಾಗಿ ದ ಕೃ ಭಾರದ್ವಾಜರವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ರಂಗಭೂಮಿ' ಯಲ್ಲಿ ಪ್ರಕಟಿಸಿ ನನಗೆ ಕೆಲವು ಪ್ರತಿಗಳನ್ನಿತ್ತರು 'ರಂಗಭೂಮಿ'ಯ ಆಕಾರದಲ್ಲೇ ಅದು ಪುಸ್ತಕವಾಗಿ ಪ್ರಕಟವಾಯಿತು ನನ್ನ ಸಂತೋಷಕ್ಕೆ ಪಾರವುಂಟೆ ?

ನಾಟಕ ಅಚ್ಚಾದ ಮೇಲೆ ಅದರ ಪ್ರದರ್ಶನ ಸುಗ್ಗಿ ಆರಂಭ ವಾಯಿತು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಎನ್ ಎಸ್. ನಾರಾಯಣ ಶಾಸ್ತ್ರಿಗಳು, ಮೈಸೂರು ಲಿಟರೆರಿ ಡ್ರಮಾಟಿಕ್ ಅಸೋಸಿ ಯೇಷನ್ನಿನಲ್ಲಿ ಆನಂದರಾಯರು, ಬಳ್ಳಾರಿಯಲ್ಲಿ ಟಿ. ರಾಘವಾಚಾರ್ಯರು ಅದನ್ನು ಪ್ರದರ್ಶನಮಾಡಿದರು ಕನ್ನಡನಾಡಿನ ಪ್ರತಿಯೊಂದು ಊರಿ ನಲ್ಲೂ ನನ್ನ ನಾಟಕ ಪ್ರದರ್ಶಿತವಾಗಿ ಬಹುಜನರ ವಿಶ್ವಾಸವನ್ನು ನನಗೆ ದೊರಕಿಸಿಕೊಟ್ಟಿತು

೧೯೨೯ ರಲ್ಲಿ ಧಾರವಾಡದಲ್ಲಿ ಪ್ರಥಮ ನಾಟಕ ಸಮ್ಮೇಳನ ನಡೆದಾಗ ಅಧ್ಯಕ್ಷರಾದ ಟಿ ರಾಘವಾಚಾರ್ಯರು ತಮ್ಮ ಗೆಳೆಯರಾದ ವಟ್ಟಂ ರಾಮರಾಯರು, ವೆಂಕೋಬಾಚಾರ್ಯರು, ತಿಪ್ಪಯ್ಯನವರು, ಇವರೊಂದಿಗೆ 'ಮದುವೆಯೋ ಮನೆಹಾಳೋ' ಪ್ರದರ್ಶಿಸಿದರು. ಅಂದು ರಾಘವಾಚಾರ್ಯರ ಸೋದರರು ರಾಮಾವಧಾನಿ ಪಾತ್ರ ವಹಿಸಬೇ ಕಾಗಿತ್ತು. ಅವರಿಗೇನೋ ಅಸಂದರ್ಭವಾಗಿ ಬರಲಾಗುವುದಿಲ್ಲವೆಂದು ಬಳ್ಳಾರಿಯಿಂದ ತಂತೀ ಬಂತು ರಾಘವಾಚಾರ್ಯರು ಚಿಂತಾಕ್ರಾಂತ ರಾದರು ಬೋರ ಆಚಾರ್ಯರ ಮೆಚ್ಚಿನ ಪಾತ್ರ. ಅದನ್ನು ಅಭಿನಯಿಸ ಲಾಗುವುದಿಲ್ಲ ಎಂದು ಅವರು ಬಹಳ ದುಃಖಪಟ್ಟರು. ನನ್ನ ನಾಟಕ ನಿಂತು ಹೋಗುತ್ತದಲ್ಲಾ ಎನ್ನುವ ದುಃಖ ನನಗೆ ನಾನೇ ಅವಧಾನಿ ಪಾತ್ರ ಅಭಿನಯಿಸಬೇಕಾಯಿತು ಮೈಸೂರಿನ ಮನೆಮಾತು ಉತ್ತರ ಕರ್ನಾಟಕದ ಜನಕ್ಕೆ ಅರ್ಥವಾಗುವುದಿಲ್ಲವೆಂಬ ಭ್ರಾಂತಿಯನ್ನು ನನ್ನ ನಾಟಕ ಅಳಿಸಿತು

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಪ್ರೊ. ಅ ತು ಸಾಸ್ನೂರರವರು ಒಂದು ಪ್ರಯೋಗ ನಡೆಸಿದರು ಮೈಸೂರು ಭಾಷೆಯನ್ನು ಉತ್ತರ ಕರ್ನಾಟಕದ ರೂಢಿಭಾಷೆಗೆ ಮಾರ್ಪಡಿಸಿ, 'ಮದುವೆಯೋ-ಮನೆಹಾಳೋ' ನಾಟಕವನ್ನು ಯಶಸ್ವಿಯಾಗಿ ಅಭಿನಯಿಸಿದರು. ವರದಾಚಾರ್ಯರ ಸ್ಮಾರಕೋತ್ಸವ, ಬಿ ಹಾ ರ ಭೂಕಂಪದಲ್ಲಿ ನೊಂದವರ ಸಹಾಯಕ್ಕೆ ಕೂಡಿಸಿದ ನಿಧಿ ಸನ್ನಿವೇಶಗಳಲ್ಲಿ ನಾನು ನಾಟಕವನ್ನು ದಿಗ್ದರ್ಶಿಸಿದಾಗ ಎಚ್ ಆರ್ ಹನುಮಂತರಾಯರು, ಕೆ ಜಿ ರಾಮಚಂದ್ರರಾಯರು, ಬಿ ಎಸ್ ಸಿ ಸ್ವಾಮಿ ಇವರು ಸಹಕರಿಸಿದರು

ತರುವಾಯ ಬೆಂಗಳೂರಿನ ಯುನೈಟೆಡ್ ಆರ್ಟಿಸ್ಟ್ಸ್ ಸಂಸ್ಥೆಯು, ಸಿ ಕೆ ನಾಗರಾಜರಾಯರು, ಎಲ್ ರಾಜಾರಾಯರು, ನಾಗೇಶರಾಯರು ಈ ನಾಟಕವನ್ನು ಹಲವು ಸಾರಿ ಸೊಗಸಾಗಿ ಅಭಿನಯಿಸಿದರು

ನನ್ನ ಬಾಲ್ಯದೆಸೆಯಲ್ಲಿ ಬರೆಯಲ್ಪಟ್ಟ ಈ ನಾಟಕದಲ್ಲಿ ಕೆಲವು ದೋಷಗಳಿದ್ದವು ಕೆಲವು ಭಾಷಣಗಳು ಉದ್ದುದ್ದವಾಗಿದ್ದವು, ಕೆಲವು ಕಡೆ ರಂಗಜೋಡಣೆಗೆ ತೊಂದರೆಯಾಗುತ್ತಿತ್ತು, ಕೆಲವು ಕಡೆ ನಾಟಕ ಮೊಟಕಾಗಿ ಕಾಣುತ್ತಿತ್ತು ಈ ದೋಷಗಳನ್ನು ಪರಿಹರಿಸಿ ನಾಟಕವನ್ನು ಎರಡನೆಯ ಬಾರಿಗೆ ಪ್ರಕಟಿಸಬೇಕೆಂಬ ಆಕಾಂಕ್ಷೆಯಿದ್ದರೂ ಅದು ಕಾರ್ಯರೂಪಕ್ಕೆ ಈವರೆಗೆ ಬರಲಿಲ್ಲ ಅಂದಿನ ನನ್ನ ಉದ್ದೇಶ ಇಂದು ಸಫಲವಾದುದಕ್ಕೆ ನಾನು ಸಂತೋಷಿಸುತ್ತೇನೆ

ಈ ಮುದ್ರಣದಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿದ್ದೇನೆ. ರಾಜು, ಸಾಧು ಎಂಬೆರಡು ಹೊಸ ಪಾತ್ರಗಳು ಬಂದಿವೆ ನಾಲ್ಕು ಹೊಸ ದೃಶ್ಯಗಳನ್ನು ಸೇರಿಸಲಾಗಿದೆ. ಕೆಲವು ದೀರ್ಘಭಾಷಣಗಳನ್ನು ತೆಗೆದು ಸಂಭಾಷಣೆ ಬೆಳೆಸಲಾಗಿದೆ

ನನ್ನ ನಾಟಕವನ್ನು ಬೇರೆ ಬೇರೆ ಕಡೆ ರಂಗದ ಮೇಲೆ ತಂದು ಉಪಕಾರಮಾಡಿದ ಎಲ್ಲ ಮಿತ್ರರನ್ನೂ, ಇದರ ಸಂಸ್ಕರಣ, ಪ್ರಕಾಶನಕ್ಕೆ ನೆರವಾದ ಹಿರಿಯರನ್ನೂ ನಾನು ವಿಶ್ವಾಸದಿಂದ ಭಕ್ತಿಯಿಂದ ಸ್ಮರಿಸು.

ತ್ತೇನೆ. ಈ ಮುದ್ರಣವನ್ನು ಪ್ರಕಟಿಸಿ ನನ್ನ ಮನಸ್ಸಿಗೆ ಮಿಗಿಲಾದ ಸಂತೋಷವನ್ನುಂಟುಮಾಡಿರುವ ಆನಂದ್ ಬ್ರದರ್ಸ್ ಕಂಪೆನಿಯ ಒಡೆಯರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆ ಸಮರ್ಪಿಸುತ್ತೇನೆ ಎಂದಿನಂತೆ ಪುಸ್ತಕವನ್ನು ಅಚ್ಚುಗಟ್ಟಾಗಿ ಮುದ್ರಿಸಿರುವ ಈಸ್ಟರ್ನ್ ಪ್ರೆಸ್ ಒಡೆಯರಾದ ಗೆಳೆಯ ಎಂ ಎಸ್. ಚಿಂತಾಮಣಿಯವರಿಗೆ ನನ್ನ ನೆನಕೆ ಸಲ್ಲಿಸುತ್ತೇನೆ.

ಈ ನಾಟಕಕ್ಕೆ ಮೂರು ರೇಖಾ ಚಿತ್ರಗಳನ್ನು ಬರೆದುಕೊಟ್ಟಿರುವ ಗೆಳೆಯ ಜಿ ಶ್ರೀನಿವಾಸರಾವ್ ಬಿ ಎ ಬಿ ಎಲ್ ಅವರಿಗೆ ನನ್ನ ವಂದನೆ ಸಲ್ಲುತ್ತದೆ

"ಅನ್ನಪೂರ್ಣ" ಅ. ನ. ಕೃಷ್ಣರಾಯ

ವಿಶ್ವೇಶ್ವರಪುರ
ಬೆಂಗಳೂರು-೨
೨೬-೬-೧೯೫೦

---

# ಮೊದಲಿನ ಮಾತು

(ಮೊದಲನೆಯ ಮುದ್ರಣ)

—— : ——

ಈ ಪ್ರಹಸನವನ್ನು ನಾನು ಬರೆದು ಈಗ್ಗೆ ಐದುವರ್ಷಗಳ ಮೇಲಾದುವು. ಕೆಲವು ದಿವಸಗಳ ಹಿಂದೆ ಅಜ್ಞಾತವಾಸದಿಂದದನ್ನು ಹೊರತೆಗೆದು ಶ್ರೀಯುತ ಸಿ. ಕೆ. ವೆಂಕಟರಾಮಯ್ಯನವರ (ಮೈಸೂರು ಸರ್ಕಾರದ ಕನ್ನಡ ಭಾಷಾಂತರಕಾರರು) ವಿಮರ್ಶೆಗೀಯಲು ಅವರು ಆಗತ್ಯವಾಗಿ ಪ್ರಕಟಿಸಬೇಕೆಂದು ನನ್ನನ್ನು ಪ್ರೇರೇಪಿಸಿದರು. ಗ್ರಂಥವು ನನಗೂ ನನ್ನ ಕೆಲವು ಗೆಳೆಯರಿಗೂ ಇತ್ತ ಆನಂದವನ್ನೇ ಇತರ ಕನ್ನಡ ಓದುಗರಿಗೂ ಕೊಡಲೆಂಬ ಆಸೆಯಿಂದ ಪ್ರಕಟಿಸಲೊಪ್ಪಿದೆನು.

ಗ್ರಂಥಕ್ಕೆ ವಿಚಾರಪರವಾದ ಮುನ್ನುಡಿಯನ್ನು ಬರೆದುಕೊಟ್ಟ ನನ್ನ ಗುರುಸ್ವಾಮಿಯರಾದ ಪಂಡಿತ ತಾರಾನಾಥರವರಿಗೂ, ಸಾಹಿತ್ಯ ದೃಷ್ಟಿಯ ಉಪೋದ್ಘಾತವನ್ನು ಬರೆದುಕೊಟ್ಟ ಶ್ರೀಯುತ ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಎಲ್ ಎಲ್ ಬಿ ಯವರಿಗೂ, ತಮ್ಮ ಅಮೋಘವಾದ "ರಂಗಭೂಮಿ"ಯಲ್ಲಿ ಪ್ರಕಟಿಸಿದ ನನ್ನ ಹಿರಿ ಬಂಧುಗಳಾದ ವಿದ್ಯಾಭೂಷಣ ಶ್ರೀ ದತ್ತಾತ್ರೇಯ ಕೃಷ್ಣ ಭರದ್ವಾಜರವರಿಗೂ ನಾನು ಕೃತಜ್ಞನು

"ಅನ್ನಪೂರ್ಣ"
ವಿಶ್ವೇಶ್ವರಪುರಂ
ಬೆಂಗಳೂರು ಸಿಟಿ.

ಅ. ನ. ಕೃಷ್ಣರಾಯ,
ಗ್ರಂಥಕರ್ತ

—— ——

# ಪಂಡಿತ ತಾರಾನಾಥರವರ

# ಮುನ್ನುಡಿ

ಸಂಸ್ಥಿತಿಗನುಸಾರವಾಗಿ ಬದಲಾಗುವಶಕ್ತಿಯೇ ಬದುಕಿರೋಣದರ ಚಿನ್ಹವು. ತನುಮನಸ್ಸುಗಳಲ್ಲಿಯೂ ಈ ಶಕ್ತಿಯು ಇರತಕ್ಕದ್ದು. ಮನಸ್ಸಿನ ತ್ರಯೀ ಶಕ್ತಿಗಳಿಂದಲೇ ಮಾನವನಿಗೆ ಜೀವರಾಶಿಗಳಲ್ಲಿ ಪ್ರಾಧಾನ್ಯವು ಬಂದಿರುವದು. ವಿವೇಚನೆ, ಕಲ್ಪನೆ, ರಚನೆ ಈ ಮೂರು ಶಕ್ತಿಗಳು ಯಾರಲ್ಲಿ ಎಚ್ಚರವಾಗಿರುತ್ತವೋ ಅಂಥವನೇ ಮನುಷ್ಯನು. ಇವು ಮೂರು ಇಲ್ಲದೆ ಬರೆಯ ಅನುಕರಣದಿಂದ ಮಾತ್ರ ಮಾನವನಾಗುವುದಿಲ್ಲ. ಟೊಳ್ಳು ಅನುಕರಣವು ವಿನಾಶ ಲಕ್ಷಣವು. ಹಿಂದೂ ಜನಾಂಗವು ಎಂದಿನಿಂದ ಅದಕ್ಕೇ ದೊಡ್ಡ ಪದವಿಯನ್ನು ಕೊಟ್ಟಿತೋ ಅಂದಿನಿಂದಲೇ ಅದರ ದಾಸ್ಯವು ಮೊದಲುಗೊಂಡಿತು ; ಯಾಕಂದರೆ ಮನಶ್ಶಕ್ತಿಗಳು ಮಾಯವಾದವು. ಇಹಪರಗಳಿಗೂ ಮನಸ್ಸೇ ಆಧಾರವಲ್ಲವೇ ? ಅದೇ ಸಹಜ ಗುಣ ಶಕ್ತಿಗಳನ್ನು ಕಳೆದು ಕೊಂಡಮೇಲೆ ಮಾನವ್ಯವು ಸ್ವಾತಂತ್ರ್ಯ ವಿಕಾಸಗಳ ಪ್ರತಿಯೂ ಉಳಿಯುವದು ಹೇಗೆ ಮತ್ತೆ ? ಇತ್ತೀಚೆಗೆ ನೂರಾರು ವರ್ಷಗಳಿಂದ ನಮ್ಮಲ್ಲಿ ಹೊರಟ ಶಾಸ್ತ್ರ ಕಾವ್ಯ ನಾಟಕ ಸಾಹಿತ್ಯ ಗ್ರಂಥಗಳಲ್ಲನೇಕಗಳಲ್ಲಿ ಬರೆಯ ಚರ್ವಿತಚರ್ವಣವೇ ಪ್ರಧಾನ. ಲೇಖಕರ ಉದ್ದೇಶವು ತಮಗೆ ತೋಚಿದ ಸತ್ಯವನ್ನು ಸಾರುವದು ಅಷ್ಟಾಗಿಲ್ಲ. ವಾಚಕರ ಮನಸ್ಸನ್ನು ರಂಜಿಸುವದೇ ಅವುಗಳ ಮುಖ್ಯ ಧ್ಯೇಯ ಮತ್ತು ವಿಚಾರ ಶೂನ್ಯ ರೂಢಿಬದ್ಧ ಸಮಾಜದಲ್ಲಿ ಅವುಗಳಿಗೇ ಕೀರ್ತಿಯು ಹೆಚ್ಚು !

ಆದರೆ ಸುದೈವವಶಾತ್ ಕಾಲವು ಬದಲಾಗುತ್ತಿದೆ. ದಾಸ್ಯದ ಸಂಕಲೆಯ ಬಿಗಿಯು ಜನತೆಯಲ್ಲಿ ಗೋಳನ್ನಿಟ್ಟಿದೆ. ರೂಢಿಯ ಕ್ರೂರ ಬಂಧನವು ಬಡಜನತೆಯನ್ನು ಹೊಡೆದೆಬ್ಬಿಸಿದೆ. ಯೌವನವು ತನ್ನ ಅನುಕೂಲತೆಗಾಗಿ ವೃದ್ಧಾಚಾರಕ್ಕೆ ತಲೆಬಾಗಿಸಲೊಪ್ಪುವುದಿಲ್ಲ. ಅದರ

ಹುರುಪು ಮುದಿ ಮಾಟಕ್ಕೆ ಸೊಪ್ಪನ್ನು ಹಾಕದೆ ಸರ್ವಾಂಗ ಸ್ವಾತಂತ್ರ್ಯ ವನ್ನು ಪಡೆಯಲುದ್ಯುಕ್ತವಾಗಿದೆ. ಅಜ್ಜನೆಟ್ಟ ಆಲದ ಮರಕ್ಕೆ ನೀರನ್ನು ಹಾಕಲಿಕ್ಕೆ ಅದು ಮೂಗು ಮುರಿಯುತ್ತಿದೆ. ಹಿಂದೆ ನೋಡಿ ಮುಂದೆ ನಡೆಯುವ ಅಸಹಜಗತಿಯಲ್ಲಿ ಪ್ರಗತಿಯಿಲ್ಲವೆಂಬುದು ಯುವಕರಿಗೆ ಚೆನ್ನಾಗಿ ತಿಳಿದು ಬಂದಿದೆ. ವಿವೇಕಯುತ ಸಂಗ್ರಾಮವೇ ಮಾನವ ಜೀವಿಯ ಲಕ್ಷಣವೆಂಬುದು ಯುವಕರಿಗೆ ತಿಳಿದುಬಂದಿರುವದರಿಂದ ಅವರು ಶೋಧ ಸಾಹಸಪ್ರಿಯರಾಗುತ್ತಿದ್ದಾರೆಯೇ ಹೊರತು ಅನು ಕೂಲತೆಯ ಷಂಡಮಾರ್ಗವನ್ನು ತುಳಿಯುವುದಿಲ್ಲ. ಈ ನವಜೀವನದ ಸ್ಫೂರ್ತಿಯು ಧೈರ್ಯದಿಂದ ಅವರ ಮನಸ್ಸನ್ನು ತುಂಬಿದೆ. ಕಲಿ ಯುಗವೆಂದರೆ ಕಲಹ ಯುಗವೆಂಬುದನ್ನು ಯೌವನವು ಮನವರಿತು ಕೊಂಡಿದೆ. ಸತ್ಕಲಹದ ಪರಿಣಾಮವೇ ಕಲಾ ಪ್ರಪಂಚವೆಂಬುದು ಮಹಾನುಭಾವರ ಮತ. ಹೀಗಿರುವಾಗ ಹೊಸದಾದ ಯುಗವನ್ನೇ ಹುಟ್ಟಿಸಬೇಕೆಂದು ಸೊಂಟಕಟ್ಟಿಕೊಂಡ ಯುವಕರು ಹಳೆಯದಾಗಿರು ವಂಥಾದ್ದೆಲ್ಲವನ್ನೂ ಪೂಜಿಸುವರೋ? ಅವರ ವಿಚಾರಗಳೂ ಕಲಾ ಸಾಹಿತ್ಯಗಳೂ ಹೊಸ ಹುರುಪಿನವೇ ಹೊಸ ಮಾದರಿಯವೇ ಆಗಿರ ತಕ್ಕದ್ದಲ್ಲವೇ?

ಶ್ರೀ ಕೃಷ್ಣರಾಯರ ಈ ನಾಟಕವು ನವಯುಗದ ನವ ಉತ್ಪತ್ತಿಯು. ಹಿಂದೆ ನೋಡುವವರಿಗದು ಅಯೋಗ್ಯವಾಗಿ ಕಾಣಬರ ಬಹುದು. ಆದರೂ ಮುಂದೆ ನೋಡುತ್ತ ಸತ್ಯಯುಗದ ಬುನಾದಿ ಯನ್ನು ಹಾಕಲಿಚ್ಛಿಸುವವರಿಗೆ ಇದು ಹಿತವನ್ನು ಮಾಡದಿರಲಾರದು. ಇವರ ಹುರುಪು ಬೆಳೆಯುತ್ತ ಪುಸ್ತಕ ಪ್ರಪಂಚಕ್ಕೆ ಇವರಿಂದ ಯೋಗ್ಯ ಸೇವೆಯಾಗಲಿ ಎಂದು ಜಗನ್ಮಾತೆಯನ್ನು ಪ್ರಾರ್ಥಿಸುತ್ತೇನೆ.

"ಪ್ರೇಮಾಯತನ"
ತುಂಗಭದ್ರ.

**ತಾರಾನಾಥ.**

# ಶ್ರೀ ಸಿ. ಕೆ. ವೆಂಕಟರಾಮಯ್ಯ
### ಎಂ.ಎ., ಎಲ್‌ಎಲ್. ಬಿ. ಯವರ

# ಉಪೋದ್ಘಾತ

---

ನಮ್ಮ ದೇಶದಲ್ಲಿ ಕೆಲವರು ಹಿರಿಯರ ಅಧ್ಯವಸಾಯದಿಂದ ಈಚೆಗೆ ನವಜೀವನದ ಬೆಳದಿಂಗಳೊಂದು ಎಲ್ಲ ಕಡೆಗಳಲ್ಲಿಯೂ ಬೆಳಗುತ್ತಾ ಇದೆ. ಎಲ್ಲಿ ನೋಡಿದರೂ ನಮ್ಮ ತಾಯಿ ನುಡಿಯಾದ ಕನ್ನಡದ ಮೇಲಣ ಪ್ರೇಮವು ಒಂದಲ್ಲ ಒಂದು ರೂಪದಲ್ಲಿ ತಾಂಡವ ಮಾಡುತ್ತಾ ಇದೆ. ತರುಣರಿಗಂತೂ ಭಾಷಾಸೇವೆ ಮಾಡುವ ನಿತ್ಯ ವ್ರತವನ್ನೇ ತಾಳಬೇಕೆಂಬ ಕುತೂಹಲ. ಈ ಗ್ರಂಥವೂ ಅಂತಹ ಕುತೂಹಲದ ಸತ್ಫಲ.

ಇದೊಂದು ನಾಟಕ ರೂಪದ ಸಾಮಾಜಿಕ ಚಿತ್ರ. ವೃದ್ಧರು ವಿವಾಹದ ಹುಚ್ಚಿಗೊಳಗಾಗಿ ತಮ್ಮನ್ನು ನಂಬಿದ ನಿರಪರಾಧಿನಿಯಾದೊಬ್ಬ ಅಬಲೆಯನ್ನು ದುಃಖದಲ್ಲಿ ಮುಳುಗಿಸುವ ಭಯಾನಕ ವ್ಯಾಪಾರವು ಪ್ರತ್ಯಕ್ಷದಲ್ಲಿಯೂ ಅಲ್ಲಲ್ಲಿ ನಡೆಯುತ್ತಲೇ ಇದೆ. ಆದರೆ ಇದೇ ಸನ್ನಿವೇಶವನ್ನೇ ಗ್ರಂಥಕರ್ತರು ವಿಡಂಬನ (Satire) ರೂಪದಲ್ಲಿ ಚಿತ್ರಿಸಹೊರಟಿದ್ದರೂ ಅದನ್ನು ಬಹಳ ಚಮತ್ಕಾರವಾಗಿ ತಂದಿದ್ದಾರೆ. ಶೇಷಗಿರಿರಾಯನೆಂಬೊಬ್ಬ ಶ್ರೀಮಂತನಿಗೆ ವೃದ್ಧಾಪ್ಯದಲ್ಲಿ ವಿವಾಹದ ಆಸೆಯು ಹುಟ್ಟುತ್ತದೆ. ಅವನಿಂದ ಹಣವನ್ನು ಸೆಳೆಯುವ ಆಸೆಯುಳ್ಳ ಅವಧಾನಿಯೊಬ್ಬನು, ಆ ಹುಚ್ಚಿಗೆ ಬಲವಾದ ಧೂಪವನ್ನು ಹಾಕುತ್ತಾನೆ. ವೃದ್ಧ ಶೇಷಗಿರಿರಾಯನು ತನಗೆ ಕನ್ಯೆಯು ಬೇಕೆಂಬುದಾಗಿ ವರ್ತಮಾನ ಪತ್ರಿಕೆಯಲ್ಲಿ ಪ್ರಕಟಿಸುತ್ತಾನೆ. ಅದನ್ನು ಅವನ ಅಣ್ಣನ ಮಗನಾದ ಗಂಗಾಧರನು ನೋಡುತ್ತಾನೆ. ಅವನೂ, ಅವನ ಸ್ನೇಹಿತನಾದ ಕೃಷ್ಣಸ್ವಾಮಿಯೂ, ಮುದುಕನಿಗೆ ಬುದ್ಧಿಯನ್ನು ಕಲಿಸಲು ಚಿಂತಿಸುತ್ತಾರೆ. ಮಾಧು ನಾಟಕ

ದಲ್ಲಿ ಅಭಿನಯ ಮಾಡುತ್ತಿದ್ದವನು. ಅವನು ಹೆಣ್ಣು ವೇಷವನ್ನು ಹಾಕಿಕೊಂಡು ಲಲಿತೆಯೆಂಬ ಹೆಸರನ್ನಿಟ್ಟುಕೊಳ್ಳುವಂತೆ ಯೋಚನೆ ಮಾಡಿ ಮುದುಕನ ಪ್ರಕಟಣೆಗೆ ಉತ್ತರವನ್ನು ಬರೆಸುತ್ತಾರೆ. ಮುದುಕ ಶೇಷಗಿರಿರಾಯನು ಅದನ್ನೇ ನಂಬಿ, ತನಗೆ ಪ್ರೌಢೆಯಾದ ಪತ್ನಿಯು ದೊರೆತುದಕ್ಕಾಗಿ ಆನಂದಪಟ್ಟು, ಅದಕ್ಕಾಗಿ ಜನರು ತನ್ನನ್ನು ಹಾಸ್ಯಮಾಡಿಯಾರೆಂದು ಬಗೆದು ಬಹಳ ರಹಸ್ಯವಾಗಿ ವಿವಾಹದ ಶಾಸ್ತ್ರವನ್ನು ಮುಗಿಸುತ್ತಾನೆ. ಊರಿನಲ್ಲಿ ಪ್ಲೇಗಿನ ದೆಸೆಯಿಂದ ಜನರೆಲ್ಲ ಊರುಬಿಟ್ಟಿದ್ದವರು, ಇನ್ನೂ ಮನೆಗಳಿಗೆ ಬಂದಿರುವುದಿಲ್ಲ ಆಗ, ಅವಧಾನಿಯ ದಮನಕ ಸಂಧಾನದಿಂದ ಓಲಗವೂ ಇಲ್ಲದೆ ರಹಸ್ಯವಾಗಿ ಮದುವೆಯು ಮುಗಿಯುವುದು. ಬಳಿಕ, ಲಲಿತೆಯ ವೇಷಧಾರಿಯಾದ ಮಾಧು ಶೇಷಗಿರಿ ರಾಯನನ್ನು ಕಾಡಲುಪಕ್ರಮಿಸುವನು. ಶೇಷಗಿರಿರಾಯನು ತನ್ನ ಪತ್ನಿಯ ಸಮೀಪವನ್ನು ಸೇರುವಂತೆಯೇ ಇಲ್ಲ. ಅವಳ ಗರ್ಜನೆಯೇ ಗರ್ಜನೆ. ಊರಿನ ಜನರೆಲ್ಲರೂ ಗುಡಿಸಲುಗಳಿಂದ ಊರಿಗೆ ಬರುವು ದರಲ್ಲಿದ್ದಾರೆ. ತನ್ನ ಪತ್ನಿಯ ಗಡಾವಣೆಯ ವಿಚಾರವು ಇತರರಿಗೆ ತಿಳಿದು ಧನಿಕನಾದ ತನ್ನ ದರ್ಪಕ್ಕೆಲ್ಲಿ ಲೋಪ ಬರುವುದೋ– ಊರಿಗೆಲ್ಲಾ ದೊಡ್ಡ ಒಕ್ಕಲಾದ ತನಗೆಲ್ಲಿ ಅಪಮಾನವಾಗುವುದೋ– ಎಂದು ಅವನು ತಳಮಳಗೊಳ್ಳುವನು. ಕೆಲವು ದಿನಗಳು ಕಳೆದರೆ ತನ್ನ ಮೋಹದ ಮಡದಿಯು ಸರಿಹೋಗುವಳೆಂಬುದು ಅವನ ಹಾರೈಕೆ. ಈ ಹಾರೈಕೆಗಳಿಂದಲೂ ಮಾನದ ಮೇಲಣ ದೃಷ್ಟಿಯಿಂದಲೂ, ಅವನು ಎಲ್ಲವನ್ನೂ ಸಹಿಸುವನು. ಲಲಿತೆಯ ಆರ್ಭಟವು ಕ್ಷಣಕ್ಷಣಕ್ಕೂ ಹೆಚ್ಚುವುದು. ಶೇಷಗಿರಿರಾಯನು ತಾನು ಕರಡಿಯ ಕೈಗೆ ಸಿಕ್ಕಿದಂತೆ ಕಿರುಗುಟ್ಟಿ ಹೋಗುವನು. ಲಲಿತೆಯ ಕಾಟದಿಂದ ಬಿಡುಗಡೆ ಹೊಂದಿದರೆ ಸಾಕೆಂದು ಅವನು ಬಯಸುವನು. ಅವನು ಹಣ್ಣಾದ ಮೇಲೆ ನಿಜಸ್ಥಿತಿಯು ಗೊತ್ತಾಗುವುದು. ಧಿಕ್ಕಾರದ ಮುಂಗಾರು ಮಳೆಯ ಹೊಡೆತವು ತಪ್ಪಿದುದೇ ಅವನಿಗೊಂದು ಸಂತೋಷ. ಅವನಿಗೆ ಚೆನ್ನಾಗಿ ಬುದ್ಧಿಯು ಬರುವುದು. ಗಂಗಾಧರನ ಸರಳ ಸ್ವಭಾವವನ್ನು

ಗ್ರಂಥಕರ್ತರು ಚೆನ್ನಾಗಿ ಚಿತ್ರಿಸಿದ್ದಾರೆ. ಆತನೂ, ಅವನ ಸ್ನೇಹಿತನೂ ಸೇರಿ ಶೇಷಗಿರಿರಾಯನಿಗೆ ಚೆನ್ನಾಗಿ ಬುದ್ಧಿಯನ್ನು ಕಲಿಸಿದ್ದಾರೆ. ಅವರು ಅವಧಾನಿಯನ್ನೂ ಸುಮ್ಮನೆ ಬಿಡುವ ಹಾಗಿಲ್ಲ. ಅವನಿಗೂ ತಕ್ಕ ಶಾಸ್ತಿಯಾಗುತ್ತಡೆ.

ಶೇಷಗಿರಿರಾಯನಿಗೆ ನಿಜವಾಗಿಯೂ ಒಬ್ಬಳು ಕನ್ಯೆಯೊಡನೆಯೇ ವಿವಾಹವು ನಡೆದು ಆ ವಿಷ ವಿವಾಹದ ವಿಷ ಫಲವು ಚಿತ್ರಸಲ್ಪಟ್ಟಿದ್ದರೆ ಗ್ರಂಥವು ಈಗಿನಷ್ಟು ರಮ್ಯವಾಗುತ್ತಿರಲಿಲ್ಲ ಆಗಿನದು, ಹೂ ಬಿಸಿಲಿರುವಾಗ ಹನಿಮಳೆಯು ಬೀಳುವ ದೃಶ್ಯವಾಗುತ್ತಿರಲಿಲ್ಲ. ಕಾಳರಾತ್ರಿಯಲ್ಲಿ ಕಾರ್ಮುಗಿಲಿನಿಂದ ಬೀಳುವ ಮುಸಲಧಾರೆಯನ್ನು ಆಗಿನ ದೃಶ್ಯವು ಹೋಲುತ್ತಿದ್ದಿತು. ಶೈಲಿಯು ಸಾಮಾನ್ಯವಾಗಿ ನಾವು ಮನೆಯಲ್ಲಿ ಮಾತನಾಡುವಂತೆಯೇ ಇದೆ. ಆದುದರಿಂದ ಅದು ಈ ಗ್ರಂಥದ ಸ್ವಭಾವಕ್ಕೆ ಒಪ್ಪುತ್ತದೆ. ಈ ಪುಟ್ಟ ಸಾಮಾಜಿಕ ವಿಡಂಬನವು ರಂಗಸ್ಥಳದಲ್ಲಿ ಅಭಿನಯಿಸಲ್ಪಡುವುದಕ್ಕೂ ಯೋಗ್ಯವಾಗಿದೆ. ಅಂತೂ, ಒಟ್ಟಿನಲ್ಲಿ ಗ್ರಂಥವು ಬಹಳ ಚೆನ್ನಾಗಿದೆ. ಅದನ್ನು ಪ್ರಾರಂಭಿಸಿದಮೇಲೆ ಓದದೆ ಬಿಡಲು ಮನಸ್ಸು ಒಪ್ಪುವುದೇ ಇಲ್ಲ. ಈ ಗ್ರಂಥಕರ್ತರು ಬರೆದಿರುವ ಇತರ ಕೆಲವು ಲೇಖನಗಳನ್ನೂ ನಾನು ಆದರದಿಂದ ಓದಿದ್ದೇನೆ. ಇವರಿಂದ ಮುಂದೆ ವಿಶೇಷವಾಗಿ ನಮ್ಮ ತಾಯಿನುಡಿಯ ಸೇವೆಯು ನಡೆಯುವಂತೆ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು
೧-೪-೨೮

ಸಿ. ಕೆ. ವೆಂಕಟರಾಮಯ್ಯ.

---

# ಪಾತ್ರ ವಿವರ

| | | | |
|---|---|---|---|
| ೧. | ಶೇಷಗಿರಿರಾಯ | .... | ವಿವಾಹಾಸಕ್ತನಾದೊಬ್ಬ ವೃದ್ಧ |
| ೨. | ಗಂಗಾಧರ | .... | ಶೇಷಗಿರಿರಾಯನ ತಮ್ಮನ ಮಗ |
| ೩. | ಕೃಷ್ಣಸ್ವಾಮಿ | .... | ಗಂಗಾಧರನ ಮಿತ್ರ |
| ೪. | ಮಾಧು | .... | ಅವರ ಗೆಳೆಯ |
| ೫. | ರಾಜು | .... | ಅವರ ಗೆಳೆಯ. ಕಾಲೇಜ್ ಮೇಟ್ |
| ೬. | ರಾಮಾವಧಾನಿ | .... | ಪುರೋಹಿತ. ಶೇಷಗಿರಿರಾಯನ ನಂಬಿಕೆಗೆ ಪಾತ್ರ |
| ೭. | ಬೋರ | .... | ಶೇಷಗಿರಿರಾಯನ ಮನೆಯಾಳು |
| ೮. | ನಂಜಮ್ಮ | .... | ,, ,, ಮನೆಯ ಅಡಿಗೆಯಾಕೆ |
| ೯. | ಭಾಗೀರತಮ್ಮ | .... | ರಾಮಾವಧಾನಿಯ ಪತ್ನಿ |
| ೧೦. | ಸುಬ್ಬು | .... | ರಾಮಾವಧಾನಿಯ ಮಗ |



**ಶೇಷಗಿರಿ**—ಎಷ್ಟೋ ಕರ್ಯೋದು ನಿನ್ನ ಕತ್ತೆ. ನಿನ್ನ ಕರ್ಯೋಕೇ ಒಬ್ಬ ಆಳ್ನಿಡ್ಬೇಕೂಂತ ಕಾಣತ್ತೆ! ಓಡಿಹೋಗಿ ಅವಧಾನಿಗಳು ಮನೆಗೆ ಬಂದಿದ್ದಾರೇನ್ನೋಡ್ಕೊಂಬಾ. ಬಂದಿದ್ರೆ ಜೊತೇಲೇ ಕರ್ಕೊಂಬಾ!

..............................

( ಪುಟ ೪ )

# ಮದುವೆಯೋ ಮನೆಹಾಳೋ

### ಅಥವಾ

## ಮುಪ್ಪಿನ ಮೋಹ

---

### ದೃಶ್ಯ ೧.

(ಒಂದು ಸಾಧಾರಣ ಗೃಹ. ಗೋಡೆಯ ಮೇಲೆ ಕೆಲವು ಪಟಗಳಿವೆ. ಮನೆಯಲ್ಲಿ ಕೆಲವು ಕುರ್ಚಿಗಳೂ ಒಂದು ಚಾಪೆಯುದೆ. ವೃದ್ಧ ಶೇಷಗಿರಿರಾಯ ಕುಳಿತು ಚಿಂತಾಮಗ್ನನಾಗಿದ್ದಾನೆ)

**ಶೇಷಗಿರಿ**— ಕಾದುಕಾದು ಸಾಕಾಯ್ತು. ಈ ಹಾಳು ಜೋಯಿಸನಿಗೇನು ಹೊತ್ತು ಬಂತೋ ಕಾಣೆ! ಬೆಳಿಗ್ಗೆಯಿಂದ ನಾಲಕ್ಕುಸಲ ಹೇಳಿಕಳುಹಿಸಿದರೂ ಪುಣ್ಯಾತ್ಮ ಮನೇಲಿ ಇಲ್ವಂತೆ! (ಯೋಚಿಸಿ) ಈ ಜೋಯಿಸರ ವರ್ಗ ಬಹುವಿಚಿತ್ರವಾದದ್ದು. ಅಪರ ಕರ್ಮಾಂದ್ರೆ ಅಪರಪಕ್ಷದ ಕಾಗೆಗಳ ಹಾಗೆ ಓಡಿಬರುತ್ತಾರೆ. ಶುಭ ಶೋಭನದ ಕೆಲಸಗಳೆಂದ್ರೆ ಹಳ್ಳಿಕಡೆ ಎಲ್ಲೂ ಇಲ್ದ ಕೆಲಸ ಹುಡ್ಕೊಂಡು ಹೋಗಿಬಿಡ್ತಾರೆ. ತಿಥಿಮಾಡ್ಸುವಾಗ ಇವರಿಗಿರೋ ಚುರುಕು ವರಮಹಾಲಕ್ಷ್ಮೀವ್ರತ ಮಾಡ್ಸೋವಾಗ ಎಲ್ಲಿಗ್ಹೋಗತ್ತೋ? ಇರ್ಲಿ—ಪುನಃ ಹೇಳಿ ಕಳುಹಿಸ್ತೇನೆ: ಈ ವೇಳೆಗೇನಾದರೂ ಮನೆಗೆ ಬಂದಿದ್ದಾರೇನೋ ನೋಡೋಣ. ಲೋ—ಬೋರಾ—ಬೋರಾ! (ಒಳಗಿನಿಂದ "ಬುದ್ದೀ" ಎಂದು ಪ್ರತ್ಯುತ್ತರ ಬರುತ್ತದೆ) ಏನ್ಮಾಡ್ತಾಯಿದ್ದೀಯೋ? ಬೇಗಬಾರೋ ಕತ್ತೇಮಗ್ನೇ...........

**ಬೋರ**— (ಪ್ರವೇಶಿಸುತ್ತಾ ಆತ್ಮಗತ) ಸಾಕಪ್ಪಾಸಾಕು! ಜನ್ಮ ಜನ್ಮಕ್ಕೂ ಆಳ್ಮಗನಾಗಿ ಹುಟ್ಬಾರದು. ಹುಟ್ಟಿದ್ರೂ ಇಂಥ

ಕಲ್ಡಿ ಕೈಗೆ ಮಾತ್ರ ಸಿಕ್ಕಬಾರ್ದು. ಆಡೋಮಾತ್ಗೇನೂ ಅರ್ಥಾನೇ ಇಲ್ವಾ! ಮರ್ವಾದೇನೇಬೇಡ್ವಾ–ಕಡಾಇಸ್ಕೊಂಡಾಕ್ಷಣ ಏನು, ಜೀತಾಮಾಡಾಕಿಲ್ವಾ! ಊ, ಆಡಿದ್ದೆಲ್ಲಾ ಕೇಳ್ಲೇಬೇಕು— ನಮ್ಗೋಳು ಕೇಳಿ ನಮ್ಗೆ ಸುಖಾ ಕೊಡೋ ಧಣಿ ಎಲ್ಲವ್ನೋ? (ಪ್ರಕಾಶ) ಬಂದಿವ್ನಿಬುದ್ದಿ.

**ಶೇಷಗಿರಿ**— ಎಷ್ಟೋ ಕರ್ಯೋದು ನಿನ್ನ ಕತ್ತೇ. ನಿನ್ನ ಕರ್ಯೋಕೇ ಒಬ್ಬ ಅಳ್ನಿಡ್ಬೇಕೂಂತ ಕಾಣತ್ತೆ! ಓಡಿಹೋಗಿ ಅವಧಾನಿಗಳು ಮನೆಗೆ ಬಂದಿದ್ದಾರೇನ್ನೋಡ್ಕೊಂಡ್ಬಾ ಬಂದಿದ್ರೆ ಬಿಡ್ದೆ ಜೊತೇಲೇ ಕರ್ಕೊಂಬಾ! ದಾರೀಲಿ ಕಳ್ಳಿಕಾಯಿ ಕೆಂಚಿ ಹತ್ರ ಏನಾದರೂ ಸರಸ ಸಲ್ಲಾಪಕ್ಕೆ ನಿಂತ್ಯೋ ಒದೆಗಳು ಬೀಳತ್ತೆ ಜೋಕೆ.

**ಚೋರ**— (ನಿಷ್ಕ್ರಮಿಸುತ್ತ) ಯಾವ್ನನ್ನೋಬಯ್ನುಕಾಲ್ದಲ್ಲೋ ಕೆಂಚಿ ಹತ್ರ ಓಸಿ ಕ್ಷೇಮಸಮಾಸಾರ ವಿಚಾರಿಸ್ತಿದ್ರೆ–ಅದನ್ನೋಡ್ಕೊಂಡು ಮಾರಾಯ ಸಲ್ಸಲಕ್ಕೂ ಎತ್ತಾಡಾದಾ–ಪಾಪ! ಮೊನ್ನೆ ತಾನೇ, ನಮ್ನಂಜಮ್ನೋರ್ದ್ಹಂಗೆ ಕೈಗೆ ಬಂದ ಹೈದನ್ನ ಕಳ್ಕೊಂಡ್ಲು. ಅಂಥಾವಳ್ನ ಮಾತ್ನಾಡ್ಸೋದೇ ತಪ್ಪಾ–ದೊಡ್ವಂಸ–ದೊಡ್ಮನ್ತನ ದಲ್ಲಿ ಉಟ್ಟಿದ್ರೂ ಜನಗಳ ಮ್ಯಾಗೆ ಇಸ್ವಾಸಾನೇ ಬ್ಯಾಡ್ವಾ! ಇಂಗಾಗೋಬತ್ಗೆ ಪ್ರಪಂಚ ಕೆಟ್ಟೋಗಿ ಮಳೆಬೆಳೆಯಲ್ಲಾ ನಿಂತೋದ್ದು. ವರ್ಸವರ್ಸಕ್ಕೂ ದೊಡ್ಡ ಮಾರೀ ಬಂದು ಊರ್ನೆಲ್ಲಾ ಸಾರ್ಕೊಂಡ್ಹೋಗೋದು. (ಯೋಚಿಸಿ) ಏನೋ ದೊಡ್ಡೋರು. ನಮಗೆ ಇಟ್ಟು ಬಟ್ಟೆಕೊಟ್ಟು ಕಾಪಾಡೋ ದಣ್ಗೋಳು ಅಂತಾ ಸುಮ್ಕಿದ್ರೆ ಮಾರಾಯಂಗೆ ಅದೇ ತಮಾಸಿಯಾಗ್ಹೋಯ್ತು. ಅನ್ನಲಿ ಅನ್ನಲಿ! ಇನ್ನೇಸು ದಿನ ಅಂದಾರು! ನಮ್ಮ ಹೈದಗಳು ಕಾಲಕ್ಷೇಪ ತಕ್ಕೊಂಡೋದ್ತಾ ಅವೆ–ಅವರ್ಬಂದ್ರೆ ಈವ್ನೈಗಳ ಅಪ್ವಿಯೆಲ್ಲಾ ಅಣಗ್ತೈತೆ–ಅದಿರ್ಲಿ—ನಮ್ಮಯ್ಯನೋರ್ಗೆ ಅವಧಾನಿಯ ಪ್ನೋರ ಚಪ್ಲ ಯಾಕ್ಹಿಂಗೆ ಹತ್ತೈತೆ–ದಿನಕ್ಕೈಪ್ಪತ್ಸಲ ನಾಯಿ ಅಟ್ಟದ್ಹಂಗಟ್ತಾರಲ್ಲಾ ನನ್ನ–ಒಳಸಂದರ್ಬ ಎಂಗೋ ಏನೋ!

ಛೂ-ನಂಗ್ಯಾಕೆ. ದಣಿ ಹೇಳಿದ್ಕೆಲ್ಲಾ ಮಾಡ್ಕೊಂಡು ಬಿದ್ದಿರೋ ಬಡ್ಡಾಯಿಸಾಗೆ. (ಎಂದು ನಿಷ್ಕ್ರಮಿಸಿ ಸ್ವಲ್ಪ ಕಾಲಾನಂತರ ಪುನಃ ಪ್ರವೇಶಿಸಿ) ಬರ್‍ತಾವ್ರೇ ಬುದ್ದೀ! ಮನೆಗ್ಹೋಗ್ತಿದ್ರು 'ರಾಯ್ರು ಅಷ್ಟೆ ಆಗ್ಯತೇಂತ' ಏಳಿ ಕರ್‍ಕೊಂಬಂದೆ

(ಎಂದು ಹೇಳಿ ನಿಷ್ಕ್ರಮಿಸುವನು)

(ರಾಮೂವಧಾನಿಗಳು ಪ್ರವೇಶಿಸುವರು. ಆಡಂಬರಪ್ರಿಯರು. ಕೊರಳಲ್ಲಿ ರುದ್ರಾಕ್ಷಿ; ನೊಸಳಲ್ಲಿ ವಿಭೂತಿ ಕೈಗಳಲ್ಲಿ ಪಂಚಾಂಗ, ಕೋಲು, ಒಂದು ಗಂಟು. ಉಟ್ಟಿರುವುದು ಕೊಳಕುಪಂಚೆ ಹೊದೆದಿರುವುದು ಜೀರ್ಣವಾದ ಕೆಂಪು ಶಾಲು)

**ಅವಧಾನಿ**— (ಆತ್ಮಗತ) ಬೆಳಿಗ್ನಿಂದ್ಲೂ ೮-೯ ಸಲ ಹೇಳಿ ಕಳುಹಿಸ್ದ ಪುಣ್ಯಾತ್ಮ ಎಂದೂ ಇಲ್ಲದ್ದು! ಏನೋ ವಿಶೇಷ ಇದೇಯಂತಾ ಕಾಣತ್ತೆ. ಸ್ವಲ್ಪ ಅವಕಾಶ ಸಿಕ್ಲಿ. ಈ ಲುಬ್ಧಾಗ್ರೇಸರನ ಹತ್ರ ....... (ಪ್ರಕಾಶ) ರಾಯ್ರಿಗೆ ತುಂಬಾ ಆಗ್ರಹವೇನೋ?

**ಶೇಷಗಿರಿ**— (ಕುಳಿತಿದ್ದವನೆದ್ದು ಮರ್ಯಾದೆಯಿಂದ ಸ್ವಾಗತ ಬಯಸುತ್ತಾ) ಹೊ! ಹೊ! ಅವಧಾನಿಗಳು ಕಡೆಗೂ ಬಂದೇ ಬಿಟ್ಟರು! ಸಂತೋಷ. ಇದೇನವಧಾನಿಗಳೇ ಹೀಗೆ ಮಾಡಿಬಿಟ್ಟರಿ! ಈ ಸಲ ಹೊಸಪದ್ಧತಿ ತೆಗೆದು ಉಪಚಾರಕ್ಕೆ ಕಾಯ್ದುಬಿಟ್ರಲ್ಲಾ-ಬನ್ನಿ ಬನ್ನಿ-ತಮ್ಮೇಲೆ ಆಗ್ರಹಾಂದರೇನು?

**ಅವಧಾನಿ**— ರಾಯ್ರು ವೃಥಾ ಭಾವಿಸಬಾರದು! ತಮ್ಮ ವಿಚಾರದಲ್ಲಿ ನಾನು ಬೇರೆ ಎಣಿಸ್ತೇನ್ಯೇ? ಸನ್ನಿಧೀಗೆ ಬರಲು ವಿಳಂಬವಾಗ್ತಿರ್‍ಲಿಲ್ಲ. ಆದ್ರೆ-ನಮ್ಮ ನಾರಾಯಣರಾಯರ ಮನೇಲಿ ಕೊಂಚ ಶುದ್ಧ ಪುಣ್ಯಾಹ ಮಾಡ್ಬೇಕಾಗಿತ್ತಂತೆ—ಧನಿಷ್ಠಾಪಂಚಕಾಯೆಂದು ಮನೆ ಬಿಟ್ಟಿದ್ದ ಸಂಗ್ತಿ ತಮಗೆ ಗೊತ್ತೇಯಿದ್ಯೆಲ್ಲಾ—ಪಾಪ! ಅವರೇ ನಿನ್ನೆ ದಿವ್ಸ ನಮ್ಮ ಮನೆಗೆ ಬಂದು 'ಎಷ್ಟು ಹೊತ್ತಾಗ್ಲೀ, ಅವಧಾನಿಗಳ್ನೇ ಕಳುಹಿಸ್ಬೇಕು' ಎಂತ ನಮ್ಮ ಕುಟುಂಬದ ಕೈಲಿ ಹೇಳಿ ಹೋಗಿದ್ದರು-ಆ ಪ್ರಕಾರ ಹೋದೆ-ಸರಿ, ಹೋದಮೇಲೆ ಗೊತ್ತೇ

ಯಿದ್ದೈಲ್ಲಾ-ಕಲಾಪಗಳು ಬಹಳ-ಶ್ರಮ ಹೆಚ್ಚು-ಪ್ರತಿಫಲಕಡಿಮೆ-ಎಲ್ಲಾ ಶೇಷಗಿರಿರಾಯರಂತೆ ಉದಾರ ಹೃದಯರಾಗಿದ್ರೆ ಈ ವೇಳೆಗೆ ಮನೆಗೆ ಚಿನ್ನದ ಕಳಶಹಾಕಿಸಿ ಬಿಡ್ತಿದ್ದೆ ಸ್ವಾಮಿ: ಮುಖ್ಯ-ಎಲ್ಲಾ ದಕ್ಕೂ ಈಶ್ವರನ ಅನುಗ್ರಹಬೇಕು! ತಮಗೆ ಕಾದುಕಾದು ತುಂಬಾ ಬೇಸರವಾಯಿತೇನೋ? ನಾನು ಹೋಗ್ತಾನೇ ಇರಲಿಲ್ಲ..... . ಆದರೆ........

**ಶೇಷಗಿರಿ**— (ಮಧ್ಯೆ ತಡೆದು) ಹಾಗಂದ್ರೇನವಧಾನಿಗಳೇ! ತಾವು ನಮ್ಮೊಬ್ಬರಿಗೇ ಏನು ಬೇಕಾದವರು? ಊರಿಗೇ ಬೇಕಾದವರು!-ಎಲ್ಲರಿಗೂ ತಮ್ಮನ್ನು ಕಂಡರೆ ಪಂಚಪ್ರಾಣ. ರಾಮಾವಧಾನಿಗಳ ಪೌರೋಹಿತ್ಯ-ಸುಬ್ರಹ್ಮಣ್ಯಜೋಯಿಸರ ವೈದ್ಯಾಂದ್ರೇನು-ಎರಡೂ -ಜಗತ್ಪ್ರಸಿದ್ಧಿಯಲ್ವೇ?

**ಅವಧಾನಿ**— ಮುಖ್ಯ-ಎಲ್ಲಾ ಸ್ವಾಮಿಯ ಅನುಗ್ರಹ! ತಮ್ಮ ವಿಶ್ವಾಸವೇ ಇದಕ್ಕೆ ಕಾರಣವೇ ಹೊರ್ತು ನಮ್ಮ ಯೋಗ್ಯತೆಯೇನಲ್ಲ. ನಾವೇನು-ಕೇವಲ ಬಡಪಕ್ಷಿಗಳ ಹಾಗೆ, ತಾವು ಫಲಭರಿತವೃಕ್ಷದ ಹಾಗೆ. ಏನು, ಇಷ್ಟು ತ್ವರೆಯಿಂದ ಬರಮಾಡಿದ್ದು?

**ಶೇಷಗಿರಿ**— ಅದೊಂದು ಬಹುಗೂಢವಾದ ವಿಚಾರ. ತಮ್ಮಿಂದಲ್ಲದೆ ಬೇರೊಬ್ಬರಿಂದ ಮಾಡಿಸಲು ನನಗಿಚ್ಛೆಯಿಲ್ಲ.

**ಅವಧಾನಿ**— ಹೇಳಿ, ಇಷ್ಟೊಂದು ಸಂಕೋಚವೇನು! ನನ್ನ ಕೈಯಲ್ಲಿ ಸಾಧ್ಯವಾಗುವ ಹಾಗಿದ್ರೆ ಅಗತ್ಯವಾಗಿ ಮಾಡಿಕೊಡ್ತೇನೆ.

**ಶೇಷಗಿರಿ**— (ಅನುಮಾನಿಸಿ)ಏನೂಂದರೆ........ಒಂದು ಜಾತಕ ಬರೆದು ಕೊಡಬೇಕು.

**ಅವಧಾನಿ**— ಇಷ್ಟೇ ತಾನೆ! ಇಷ್ಟಕ್ಕಿಷ್ಟು ಪೀಠಿಕೆಯೇ? ಯಾರದು?

**ಶೇಷಗಿರಿ**— ಯಾರದೇನು ಬಂತು? ನನ್ನದೇ!

**ಅವಧಾನಿ**— (ಯೋಚಿಸುತ್ತಾ) ತಮ್ಮಿದೆಯಲ್ಲಾ. ಮೊನ್ನೆ ತಾನೆ ತೋರಿಸಿ ಶನಿಕಾಟ ಯಾವಾಗ ತಪ್ಪತ್ತೇಂತ ಕೇಳಿದಿರಿ. ಅದಕ್ಕೆ ನಾನು ಇದೇ ವರ್ಷದಲ್ಲಿ ಇನ್ನೆರಡು ಅಮಾವಾಸ್ಯೆ ಕಳೆಯುವುದ ರೊಳಗಾಗಿ ತಪ್ಪತ್ತೆ—ಗುರುಬಲ ಪ್ರಾರಂಭವಾಗುತ್ತೆ—ಅಧಿಕ ಧನ, ವಿದ್ಯೆ—ಇಲ್ಲಾ ವಿವಾಹ ಪ್ರಾಪ್ತವಾಗುತ್ತೆ ಎಂದು ಹೇಳಲಿಲ್ಲವೆ?

**ಶೇಷಗಿರಿ**— ನಿಜನಿಜ! ನೀವು ಹೇಳಿದ್ದೆಲ್ಲಾ ನಿಜ. ನೀವು ಹೇಳಿ ದರಲ್ಲಾ ಪ್ರಾಪ್ತಿಗಳು, ಅವುಗಳಲ್ಲಿ ಕೊನೆಯದು, ಅದನ್ನು ಹೊಂದ ಬೇಕೂಂತ ಇಚ್ಛೆ............

**ಅವಧಾನಿ**— (ನಗುತ್ತ) ಏನುಸ್ವಾಮಿ ಏನು! ವಿವಾಹವೇ—ತಮಗೆ ವಿವಾಹವೇ?

**ಶೇಷಗಿರಿ**— ಯಾಕೆ? ಯಾಕೆ? ಯಾತಕ್ಕೆ ಹೀಗೆ ನಗ್ತೀರಿ. ಇದೇನು ನಗುವಿನ ಹುಚ್ಚು!

**ಅವಧಾನಿ**— ಅಲ್ಲಾ ಸ್ವಾಮಿ. ತಮ್ಮ ಮಗ ಗಂಗಾಧರನ ವಿವಾಹಕ್ಕೆ ಪ್ರಯತ್ನ ಪಡ್ತಾಯಿದ್ದೀರಿ ಅಂತಿದ್ದೆ—ಮೋಸವಾಯಿತು—ತಮ್ಮ ಲಗ್ನಕ್ಕೇ ಪ್ರಯತ್ನ ಪಡುತ್ತಿದ್ದೀರಿ! ಇದೇನು ಭ್ರಾಂತಿ ಸ್ವಾಮಿ! ತಲೆಯಲ್ಲಾ ನರೆತುಹೋಗಿದೆ. ಬಾಯಲ್ಲಿ ಒಂದು ಹಲ್ಲೂ ಇಲ್ದೆ ಮೊನ್ನೆತಾನೆ ಕಟ್ಟಿಸಿಕೊಂಡಿರಿ. ಕೆನ್ನೆಗಳೆರಡೂ ದೊಗರ್ಬಿದ್ದು ದೋಣೀ ಹಾಗಾಗಿದೆ—ಇಂತಹ ತಮಗೆ ವಿವಾಹವೇ ಸ್ವಾಮೀ........

**ಶೇಷಗಿರಿ**— (ಆತ್ಮಗತ) ಮಿಕ್ಕಾದಾಗ ಇವನೀ ಮಾತುಗಳ್ನಾಡಿದ್ರೆ, ಕತ್ತು ಹಿಡಿದು ನೂಕಸ್ತಿದ್ದೆ. ಮುಖ್ಯ ಈಗ ನನ್ನ ಕೆಲಸ ವಾಗ್ಬೇಕು. ಉಪಾಯವಾಗಿ ಸಾಧಿಸಿಕೊಂಡಾನಂತರ ನೋಡಿ ಕೊಳ್ಳೋಣ. (ಪ್ರಕಾಶ) ಏನು ತಪ್ಪು ತಿಳಿವಳಿಕೆ ನಿಮ್ಮದು. ಅವಧಾನಿಗಳೇ? ತಲೆ ನರ್ತಿರೋದು ದೇಹದ ಗುಣ. ಈ ಕಾಲದಲ್ಲಿ ೧೮ ವರ್ಷದ ಹುಡುಗರಿಗೂ ಕೂಡ ಬಾಲನರೆಯಂತ ಬರೋದಿಲ್ವೇ— ಆ ಸಮಾಚಾರ. ಹಲ್ಲು ನೋವು ಬಂದು ಹಲ್ಲು ಕೀಳಿಸಿಕೊಂಡನೇ

ವಿನಾ ವಯಸ್ಸಿನಿಂದಲ್ಲ, ವರನ ರೂಪಲಾವಣ್ಯ ನನಗೆ ಬಿಡಿ: ಹೇಳಿದಷ್ಟು ನೀವು ಮಾಡಿಕೊಡಿ.

**ಅವಧಾನಿ**— (ನಗುತ್ತಲೇ) ಏನು ಹೇಳಿ ಸ್ವಾಮಿ. ಆಗಿಹೋಗಲಿ.

**ಶೇಷಗಿರಿ**— (ಸಾವಧಾನವಾಗಿ) ಏನೂಂದ್ರೆ. ೩೮ ವಯಸ್ಸಾಗಿರೋ ಹಾಗೆ ಗುಣಿಸಿ ಹಳೇಕರಡು ಕಾಗದದಲ್ಲಿ ನನ್ನ ಜಾತಕ ಬರೆದು ಕೊಡಬೇಕು. ಸದ್ಯಕ್ಕೆ ತಮ್ಮಿಂದಷ್ಟೇ ಆಗ ಬೇಕಾದದ್ದು. ಸಂಭಾವನೆ ವಿಚಾರದಲ್ಲೇನೂ ಯೋಚಿಸಬೇಕಾದ...........

**ಅವಧಾನಿ**— (ಆಗ್ರಹವನ್ನು ಸೂಚಿಸುತ್ತಾ) ಏನೇನು! ತಮಗಾಗಿ–ತಾವು ಕೊಡುವ ಸಂಭಾವನೆಗಾಗಿ—ಸುಳ್ಳು ಜಾತಕ ಬರೆದು ಕೊಡುವುದೋ? ಚೆನ್ನಾಗಿದೆ ಸ್ವಾಮಿ–ಬಹಳ ಚೆನ್ನಾಗಿದೆ. ಗೌರವಸ್ಥರು, ಪೂರ್ವದಿಂದಲ್ಲೂ ತಿಳಿದವರು ಮಾನಿಸ್ಥರು, ಆಚಾರಶೀಲರು ಎಂತಾ ನಾನು ಗೌರವ ಕೊಡ್ತಿದ್ದಕ್ಕೆ ಒಳ್ಳೇ ಉದಾಹರಣೆ. ಇದೇಯೋ ನಿಮ್ಮ ದುಷ್ಟಾಕಾಂಕ್ಷೆ. ವೃದ್ಧ ಬ್ರಾಹ್ಮಣ, ಕಾಶಿಗೋ ರಾಮೇಶ್ವರಕ್ಕೋ ಹೋಗಬೇಕೂಂತಿರೋ ನನ್ನ, ರೌರವ ನರಕಕ್ಕೆ ಕಳುಹಿಸಬೇಕೂಂತಾನೋ ನಿಮ್ಮ ಆಸೆ. ಚೆನ್ನಾಗಿದೆ ಸ್ವಾಮಿ, ಇದು ನನ್ನಿಂದಾಗತಕ್ಕದ್ದಲ್ಲ–ಇಗೋ ನಾನು ಹೊರಟೆ–ನಮಸ್ಕಾರ-ಯಾರ ಹತ್ರ ಬೇಕಾದ್ರೂ ಮಾಡಿಸ್ಕೊಳ್ಳಿ (ಏಳುವನು)

**ಶೇಷಗಿರಿ**— (ಭೀತನಾಗಿ) ಅವಧಾನಿಗಳೇ, ಅವಧಾನಿಗಳೇ! ನಿಮ್ಮ ದಮ್ಮಯ್ಯ, ಮೆಲ್ಲಗೆ ಮಾತಾಡಿ! ನಿಮ್ಮ ಕೂಗು ಯಾರ ಕಿವಿಗಾದ್ರೂ ಬಿದ್ರೆ ನಮ್ಮ ಶ್ರಮವೆಲ್ಲಾ ನೀರಿನಲ್ಲಿ ಹೋಮ ಮಾಡಿದಂತಾಗುತ್ತೆ. ಯೋಚನೆ ಮಾಡಿ. ಅವಸರವಸರವಾಗಿ ಯಾಕೆ ತಾನಾಗಿ ಮನೆಗೆ ಬಂದ ಲಕ್ಷ್ಮೀನ ಕತ್ತು ಹಿಡಿದು ನೂಕ್ತೀರಿ. ಕಳಕೊಂಡ ಅವಕಾಶ ಪುನಃ ಸಿಕ್ಕೋದು ಈಗಿನ ಕಾಲದಲ್ಲಿ ದುರ್ಲಭ. ನೀವೂ ದೊಡ್ಡ ಸಂಸಾರವಂದಿಗರು. ಮೊನ್ನೆ ತಾನೇ ಪುನಃ ಮದುವೆ ಬೇರೆ

ಮಾಡಿಕೊಂಡಿರಿ. ಸ್ವಲ್ಪ ಸಾಲಾಸೋಲಾ ಆಗಿರಬಹುದು. ಯೋಚನೆ ಮಾಡಿ !

**ಅವಧಾನಿ**— (ಶಾಂತ ಚಿತ್ತನಾಗಿ, ಆತ್ಮಗತ) ರಾಯರು ಹೇಳೋದು ಯುಕ್ತವಾಗಿಯೇ ಕಾಣುತ್ತದೆ. ನಾನೇ ಪುನಃ ಮದುವೆ ಮಾಡ್ಕೋಬಹುದಂತೆ-ಇವರೇಕೆ ಮಾಡಿಕೊಳ್ಳಬಾರದು ?—ಅಲ್ಲದೆ ನಾನು ಬೇಡಾಂದ್ರೂ ಈತೇನೂ ಬಿಡೋಹಾಗಿಲ್ಲ ! ಬಹು ಮೊಂಡ ಸ್ವಭಾವ ! ಇನ್ಯಾರನ್ನಾದ್ರೂ ಹಿಡ್ಕೊಂಡು ತನ್ನ ಕೆಲಸಮಾಡಿಸಿಯೇ ಮಾಡಿಸ್ಕೋತಾನೆ. ಬರೋ ನಾಲ್ಕು ಕಾಸು ನಾನ್ಯಾಕೆ ಬಿಡಬೇಕು. 'ಬೆಂದ ಮನೇಲಿ ಹಿರಿದದ್ದೇ ಲಾಭ'. ಇರಲಿ-ಸ್ವಲ್ಪ ಗಾಬರಿ ಹತ್ತಿಸಿದ್ರೆ ಎರಡು ಕಾಸು ಬರೋಕಡೆ ನಾಲಕ್ಕು ಕಾಸು ಬರುತ್ತೆ. (ಪ್ರಕಾಶ) ನನ್ನಿಂದಾಗೋ ಕೆಲ್ಸಾ ಅಲ್ಲಾ ಸ್ವಾಮಿ, ಇದು. ಏನು ! ವಯಸ್ಸಾಗಿರೋರ ವಯಸ್ಸೆಲ್ಲಾ ಕಡಿಮೆ ಮಾಡಿ, ಬೇರೆ ಹೊಸ ಜಾತಕಾನೇ ಸಿದ್ಧ ಮಾಡಬೇಕೂಂದ್ರೇನು ಸುಮ್ನಾಗತ್ಯೇ ? ಈಗ ನನಗೆ ವ್ಯವಧಾನವೂ ಇಲ್ಲ, ಮನಸ್ಸೂ ಸರಿಯಾಗಿಲ್ಲ. ಇಂಥಾ ನೀಚಕೆಲಸಕ್ಕೆ ನಾನು ಕೈ ಹಾಕಿದರೆ ನನ್ನ ಪಿತೃಗಳೇನಂತಾರೆ ಸ್ವಾಮಿ............

**ಶೇಷಗಿರಿ**— (ಆತ್ಮಗತ) ಒಳ್ಳೇ ಪ್ರಾಣಸಂಕಟ ಬಂತಲ್ಲಾ. ಇವನೇನು ಬಡಪಟ್ಟಿಗೆ ಒಪ್ಕೋಹಾಗಿಲ್ಲ. ಇರಲಿ-ಕೈಗೇನಾದರೂ ಬಿದ್ರೆ ದಾರೀಗೆ ಬರ್‍ತಾನೇನೋ ನೋಡೋಣ (ಎಂದು ನೋಟೊಂದನ್ನು ಮೆಲ್ಲಗೆ ಅವಧಾನಿಯ ಕೈಗೆ ಕೊಡುವನು)

**ಅವಧಾನಿ**— (ತೆಗೆದುಕೊಂಡು) ಏನು ಸ್ವಾಮಿ ಇದು-ಜಾತಕದ ಮೂಲವ್ರೋ ! (ಹಣವನ್ನು ಗ್ರಹಿಸಿ ಪ್ರಫುಲ್ಲವದನನಾಗಿ ಕುಳಿತಿದ್ದೆಡೆಯಿಂದ ಸ್ವಲ್ಪ ಮುಂದೆಬಂದು ನೋಟನ್ನು ತಿರುವಿ ನೋಡುತ್ತಾ ಆತ್ಮಗತ) ರೂಪಾಯಿ ! ನೋಟು ! ೫೦ ರೂಪಾಯಿ ನೋಟು ! ಭೇಷ್ ಭೇಷ್ ! ಗಟ್ಟಿಗಾಂದ್ರೆ ಈ ಕಾಲ್ದಲ್ಲಿ ನಾನೇ. ಇದಿನ್ನೂ 'ಓಂ

ಪ್ರಥಮದ ಕಾಣಿಕೆ '—ಇದುವರೆಗೆ ಇಂಥಾ ಜಾತಕಗಳನ್ನು ಬರೆದು ಕೊಟ್ಟಿದ್ದೂ ಅಂಗಾಂಗಳಿಲ್ದೇ ಇದ್ದೋರ್ಗೆಲ್ಲಾ ಮದುವೆ ಮಾಡಿಸಿದ್ದೂ ಎಷ್ಟೋ ಆಗ್ಹೋಯ್ತು. ಆದರೆ ಈ ಲೂಟಿ ಎಲ್ಲೂ ಸಿಕ್ಕಿರಲಿಲ್ಲ. ಕಾಶೀಯಾತ್ರೆಗೆ ಕೈಲಿ ಕಾಸಿಲ್ಲಾಂತಿದ್ದೆ. ಆರಂಭ ದಲ್ಲೇ ಅನಾಯಾಸವಾಗಿ ೫೦ ರೂಪಾಯಿಗಳು ದಕ್ಕಿತು ಮದುವೆ ಮುಗಿಯೋದರೊಳಗಾಗಿ ಇನ್ನೊಂದು ೩೦೦-೪೦೦ ಗಿಟ್ಟಿಸ್ಬಿದ್ರೆ ನಾನು ಪೌರೋಹಿತ್ಯ ಮಾಡಿದ್ದಕ್ಕೂ ಸಾರ್ಥಕವಿಲ್ಲ. ಕಾಶೀಗೆ ಹೋಗಿ ಮಾಡಿರೋ ಪಾಪಾನೆಲ್ಲಾ ಒಟ್ಟಿಗೆ ಗಂಗೇಲಿ ತೊಳೆದು ಬಿಟ್ಟಿರಾಯ್ತು—ಪಾಪ, ಏನುಬಂತು ಪಾಪ! ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡಿಸೂಂತ ಶಾಸ್ತ್ರವೇ ಇರೋವಾಗ! ಸಾಲದ್ದಕ್ಕೆ ಬಿದ್ದು ಹೋಗಿದ್ದ ಮನೆ ನಿಲ್ಸಿದಹಾಗಾಯ್ತು. ಇಹಕ್ಕೂ ಪರಕ್ಕೂ ಒಟ್ಟಿಗೆ ಪುಣ್ಯ ಸಾಧಿಸಬೇಕೂಂದ್ರೇನು ಸುಮ್ನಾಗ್ಲಿಲ್ಲ–ಮುಖ್ಯ–ಎಲ್ಲಾ ಕೇಳ್ಕೊಂಡು ಬಂದಿರಬೇಕು. (ರಾಯರ ಕಡೆ ತಿರುಗಿ) ರಾಯರೇ, ನೀವಾಯೋಚನೆ ಇಟ್ಕೊಕೋ ಬೇಡಿ—ಎಲ್ಲಾ ನಂಗಿರಲಿ—ಏಬು ಗೊತ್ತಾಗದ್ಹಾಗೆ ಕಾರ್ಯ ಸಾಧನೆ ನಾನು ಮಾಡಿಕೊಡುತ್ತೇನೆ. ಆದರೆ ಇಲ್ಲಿಗೇ ಆಯ್ತು ಅಂತ........ತಿಳೀ........

**ಶೇಷಗಿರಿ**— (ಹರ್ಷಿತನಾಗಿ) ಸರಿಸರಿ! ನಿಮ್ಮ ಶ್ರಮಕ್ಕೆ ಇದೇನು ಪ್ರತಿಫಲ ಅವಧಾನಿಗಳೇ? ಕೆಲಸ ಮೊದಲಾಗಲೀ ಅನಂತ್ರ ಶೇಷಗಿರಿರಾಯನ ಹಸ್ತಗುಣ ನೋಡುವಿರಂತೆ!

**ಅವಧಾನಿ**:— (ಆತ್ಮಗತ) ಆಮೇಲೆ ನೋಡೋದೇನು ಚಿಕ್ಕನಾಯ್ಕನ ಹಳ್ಳಿ ಭಂಗಾರದ ಬಟ್ಲನ್ನ! ಮಧ್ಯ ಮಧ್ಯ ವಸೂಲ್ಮಾಡಿಕೊಂಡ್ರೆ ಗಿಟ್ಟಿದ್ಹಾಗೆ!—ಸದ್ಯ ಮಹಾರಾಯ, ಬಾಯಿಬಿಟ್ಟು ಅಷ್ಟಾದರೂ ಹೇಳಿದನಲ್ಲಾ ಅದಕ್ಕೇ ಸಂತೋಷಪಡಬೇಕು. (ಪ್ರಕಾಶ) ಇನ್ನು ನಾನು ಬರಲೇ–ವಿಳಂಬವಾಯಿತು–ಆದರೇನು?–ರಾಯರ ಕೆಲಸ ಮುಖ್ಯ. ನಮ್ಮ ಸಂಸಾರ ತಾಪತ್ರಯ ಇದ್ದೇ ಇರತ್ತೆ................

**ಶೇಷಗಿರಿ**— ಅದಕ್ಕೇ ಅವಧಾನಿಗಳೇ ನಾನು ತಮಗೆ ಹೇಳಿಕಳುಹಿ-ಸಿದ್ದು. ಇನ್ನು ಬರ್ತೀರಾ ?—ಅದನ್ನ ಬೋರನ ಕೈಲಿ ಕಳುಹಿಸ್ತೀನಿ-ಸ್ವಲ್ಪ ಮುತುವರ್ಜಿ ತೊಗೊಂಡು ಜಾಗ್ರತೆ ಮಾಡಿದ್ರೆ ಅನುಕೂಲ-ವಿಷ್ಯದ ಗೋಪ್ಯತೆ ತಮಗೇನೂ ಜ್ಞಾಪಿಸಬೇಕಾಗಿಲ್ಲ !

**ಅವಧಾನಿ**— ಆ ಚಿಂತೆಯಲ್ಲಾ ನನಗ್ಬಿಡಿ ಸ್ವಾಮೀ. ಇನ್ನು ಬರ್ತೀನಿ. ಜಾತ್ಕಾನ ಬೋರನ ಕೈಲೇ ಕಳುಹಿಸೋ ಹಾಗಿದ್ರೆ ಬೇಗ ಕಳು-ಹಿಸಿದ್ರೆ ಉತ್ತಮ. ಹಳೇ ಪಂಚಾಂಗ, ಕಾಗದ ಮಸಿ, ಬೇಕಾಗತ್ವೆ. ಅಟ್ಟ ಹತ್ತೋಕೆ ಆಗಲ್ಲ—ರಾಯರಿಗೆ ಎಲ್ಲಾ ತಿಳಿದೇ ಇದೆ (ನಿಷ್ಕ್ರಮಿಸುತ್ತಾ ಆತ್ಮಗತ) ಸದ್ಯ ಒಳ್ಳೇಕೆಲ್ಸಾ ಮಾಡ್ತಾನೆ. ಬೋರಾ ಬಂದ್ರೆ ಆ ಸೌದೆಯಲ್ಲಾ ಚಚ್ಚಿಸಿ ಹಾಕಿಸ್ಬಹುದು. (ನಿಷ್ಕ್ರಮ)

**ಶೇಷಗಿರಿ**— ಇನ್ನೇನು ಮದುವೆಯಾದಂತೆಯೇ ಸರಿ. ನನ್ನ ರೊಟ್ಟಿ ಜಾರಿ ತುಪ್ಪಕ್ಕೆ ಬಿತ್ತು. ಪ್ರಥಮ ಕಾರ್ಯವಂತೂ ನಿರಾತಂಕವಾಗಿ ನೆರವೇರಿತು. ಜ್ಞಾಪಕ ಇರೋವಾಗ್ಲೇ ಆ ಬೆಂಗ್ಳೂರ ಪೇಪರ್ ಗೊಂದು ಪ್ರಕಟನೆ ಕಳುಹಿಸಿಬಿಡಬೇಕು. ಈ ಕಾಲ್ದಲ್ಲಿ ಹೆಣ್ಣುಗಳಿಗೆ ಬರವೇ-ನಾನೇ ಅದೃಷ್ಟಶಾಲಿ. ದುಡ್ಡೊಂದಿದ್ರೆ ಈ ಕಾಲ್ದಲ್ಲಿ ಆಗ್ದೇ ಇದ್ದ ಕೆಲಸವೇ ಇಲ್ಲ.

(ಪ್ರವೇಶ ಬೋರ)

**ಬೋರ**— ಬುದ್ಧೀ.

**ಶೇಷಗಿರಿ** —ಏನೋ ಅದು ! ಮಧ್ಯ ಮಧ್ಯ ಬಂದು ಯಾಕೋ ಹೀಗೆ ತೊಂದರೆ ಮಾಡ್ತಿ ? ಮಾಡೋಕೇನೂ ಕೆಲ್ಸ ಇಲ್ವೋ ?

**ಬೋರ**— ಚಿಕ್ಕ ಬುದ್ಧ್ಯೋರು ಬೆಂಗಳೂರಿಂದ ಬಂದ್ರು ಬುದ್ಧಿ-ಅದ್ಹೇಳೋಕೆ ಬಂದೆ.

**ಶೇಷಗಿರಿ**— ಗಂಗೂ ಬಂದನೇ. ಯಾವಾಗ-ಯಾರ ಜೊತೇಲಿ

**ಬೋರ**— ಈಗ್ತಾನೆ ಬಂದ್ರು ಬುದ್ಧಿ. ಜೊತೇಲಿ ಚಿಕ್ಕಮಾರನಹಳ್ಳಿ ಕಿಟ್ಟಪ್ನೋರು ಬಂದ್ರು. ಗಾಡಿಯಿಳ್ದು ಅವರು ಚಿಕ್ಕಬುದ್ಧ್ಯೋರ ಹತ್ರ ಓಸಿ ಅದೇನೋ ಇಂಗ್ಲೀಸ್ ಮಾತಾಡಿ ಹಳ್ಳೀಕಡೆ ಓದ್ರು. ಬುದ್ಧಿಯೋರು ಇಂಗೇ ಬತ್ತಾ ಅವ್ರೆ.

**ಶೇಷಗಿರಿ**— ಬೇಗ ಹೇಳಿ ಮುಗಿಸ್ದೆ ಕಣೇಯೆಲ್ಲಾ ಹೇಳ್ತಾನೆ. ಒಳಗೆ ಹೋಗಿ ನಂಜಮ್ಮಂಗೆ ಸ್ವಲ್ಪ ಕಾಫಿಮಾಡೂಂತ ಹೇಳು-ಸಕ್ಕರೆ ಕಮ್ಮಿ ಹಾಕೂಂತ ಹೇಳು—ಹೋಗು (ಬೋರನು ನಿಷ್ಕ್ರಮಿಸುವನು. ಆತ್ಮಗತ) ಈ ಬೇಸಿಗ್ಗೆ ಬರೋದಿಲ್ಲಾಂತ ಬರೆದಿದ್ದೋನು ಯಾಕೆ ಬಂದ? ಕೆಲ್ಸಾ ಮುಗಿಯೋತನಕ ಬರದಿದ್ರೆ ಚೆನ್ನಾಗಿತ್ತು. ಇರಲೀ (ನವನಾಗರಿಕ ಯುವಕನಾದ ಗಂಗಾಧರ ಪ್ರವೇಶಿಸಿ ದೊಡ್ಡಪ್ಪನಿಗೆ ನಮ್ರತೆಯಿಂದ ಸಾಷ್ಟಾಂಗ ಪ್ರಣಾಮ ಮಾಡುವನು) ಚೆನ್ನಾಗಿ ಬಾಳಪ್ಪ. ನೂರು ವರ್ಷ ಚೆನ್ನಾಗಿ ಬಾಳು. ಇಂಗ್ಲಿಷ್ ಕಲ್ತರೂ ಕೂಡ ಹಳೇಕಂದಾಚಾರದ ಪದ್ಧತಿ ಸ್ವಲ್ಪವಾದರೂ ಇಟ್ಕೊಂಡಿದ್ದೀಯಲ್ಲಾ ಅಷ್ಟೇ ಸಂತೋಷ. (ಇಬ್ಬರೂ ಕುಳಿತುಕೊಳ್ಳುವರು. ಗಂಗಾಧರ ಬಟ್ಟೆ ಬದಲಾಯಿಸುವನು.)

**ಗಂಗಾಧರ**— ಆ ಹಾಳು ಮೋಟಾರ್ ಬಸ್ಸಿನಲ್ಲಿ ಬರೋದಕ್ಕಿಂತಾ ನಡ್ಕೊಂಬರೋದೇ ಮೇಲು ದೊಡ್ಡಪ್ಪಾ. ೪೨ ಮೈಲಿ ಬಸ್ಸಿನಲ್ಲಿ ಬಂದು ಊರು ಸೇರ್ಕೊಂಡ್ರೆ ಪುನರ್ಜನ್ಮ ಬಂದ್ಹಾಗೇ ಸರಿ! ನೀನು ಗಾಡಿ ಕಳುಹಿಸ್ತೀಯಂತಿದ್ದೆ. ಮರೆತುಬಿಟ್ಯೇನೋ. ಕಳುಹಿಸಿದ್ರೆ ಚೆನ್ನಾಗಿತ್ತು. ನಂಗೂ ರೂರಲ್ ಲೈಫ್ ಸ್ವಲ್ಪ ಪರಿಚಯವಾಗೋದು.

**ಶೇಷಗಿರಿ**— ಪೇಟೆ ಹುಡುಗರು ನೀವು. ಮೋಟಾರ್ನಲ್ಲೇ ಓಡಾಡೋರೂ-ಅದ್ರಿಂದ ಟಂಗಾ ಟಂಗಾ ಅನ್ನೋ ಹಾಳು ಗಾಡಿಯಾಕೆ, ಸುಖವಾಗಿ ಬಸ್ನಲ್ಲೇ ಬಂದುಬಿಡ್ಲಿಯಂತ ಕಳುಹಿಸ್ಲಿಲ್ಲಪ್ಪಾ-ನೀನು ಆರೋಗ್ಯವಾಗಿದ್ದೀಯಾ?

**ಗಂಗಾಧರ**— ಏನಾರೋಗ್ಯವ್ರೋ? ಬೆಂಗಳೂರೊಂದು ಕಡೆ ಮಲೇರಿಯಾ ಕೊಂಪೆಯಾಗ್ತಿದೆ. ಊರಲ್ಲೆಲ್ಲಾ ಖಾಯಿಲೆ-ಕಸಾಲೆ-ಇದ್ದದ್ರಲ್ಲಿ ನಾನೇ ವಾಸಿ. ಈ ವರ್ಷ ಖಾಯಿಲೆಗೀಯಲೆ ಬೀಳ್ಲಿಲ್ಲ. ಅದಿರ್ಲಿ-ಮನೆ ವಿಚಾರ ಮಾತನಾಡು ದೊಡ್ಡಪ್ಪ-ನೀನು ಹುಷಾರಾಗಿದ್ದೀಯಾ.

**ಶೇಷಗಿರಿ**— ಏನೋ ಇದ್ದೇನಪ್ಪಾ. 'ಮನೆಗೆ ಮನುಷ್ಯನಲ್ಲ, ಸ್ಮಶಾನಕ್ಕೆ ಹೆಣವಲ್ಲ'. ನನಗೂ ವಯಸ್ಸಾಯಿತು-ನೀನೇ ಅನ್ನೋರು ದಿಕ್ಕಿಲ್ಲ?

**ಗಂಗಾಧರ**— ಹೌದು ದೊಡ್ಡಪ್ಪ! ನಿನಗೆ ಹೊತ್ತು ಕಳೆಯೋದೇ ಒಂದು ಒಗಟಾಗಿದೇಂತ ಕಾಣತ್ತೆ! ಪೂರ್ವಕಾಲದವರಾಗೋ ಹೊತ್ಗೆ ನೀವೆಲ್ಲಾ ಕಷ್ಟನಷ್ಟಗಳ್ನೆಲ್ಲಾ ನಿಭಾಯಿಸ್ಕೊಂಡು ಇಷ್ಟರ ಮಟ್ಟಿಗಾದ್ರೂ ನಗನಗ್ತಾ ಇರ್ತೀರಿ. ನಾವಾಗಿದ್ರೆ ಕೊರಗಿ ಕೊರಗಿ ಎಂದೋ ಒರಗ್ತಿದ್ವಿ! ಬೋರಾ ನಂಜಮ್ಮ ಹೇಗಿದ್ದಾರೆ ದೊಡ್ಡಪ್ಪ? ನಾನು ಕ್ರಿಸ್‌ಮಿಸ್‌ಗೆ ಬಂದಿದ್ದಾಗ ನಂಜಮ್ನೋರ್ಗೆ ವಿಷಮಶೀತ ಜ್ವರ ಆಗಿತ್ತು. ಈಗ ಹುಷಾರಾಗಿದ್ದಾರ್ಯೇ ದೊಡ್ಡಪ್ಪಾ?

**ಶೇಷಗಿರಿ**— ಎಲ್ಲಾ ಚೆನ್ನಾಗಿದ್ದಾರೆ ಮಗೂ. ಆ ಬೋರಂಗೇನು? ಎಮ್ಮೆ ಹಾಗೆ ತಿಂತಾನೆ. ಮೂದೇವಿ ಹಾಗೆ ಬಿದ್ದಿರ್‍ತಾನೆ. ಸಂ! ಆಕೆ ಹೇಳು. ಕೆಲಸ ಮಾಡ್ಬೇಕೊಂದ್ರೆ ಎಲ್ಲೂ ಇಲ್ಲದ ರೋಗ. ಇವರ ವಿಚಾರದಲ್ಲಿ ದಯಾದಾಕ್ಷಿಣ್ಯ ತೋರಸ್ತಾ ಹೋದ್ರೆ ಬರಬಾರ್ದ್ದ ಪಾಪ ಬಂದು ತಲೆಗೆ ಸುತ್ತಿಕೊಳ್ಳತ್ತೆ. ಮಗೂ ಜೋಕೆ!-ಶಾನೆ ಸ್ತುತಿಸೋಕೆ ಹೋಗಬೇಡ. 'ಅತಿ ಸರ್ವತ್ರ ವರ್ಜಯೇತ್'

**ಗಂಗಾಧರ**— ಹಾಗಂದ್ರೇನು ದೊಡ್ಡಪ್ಪಾ! ಅವರ ವಿಚಾರದಲ್ಲಿ ನ್ಯಾಯವಿಲ್ದೆ ನೀನು ಬಹಳ ಕಠಿಣಚಿತ್ತನಾಗಿದ್ದೀ. ಏನೋ ಬಡವರು-ಹಾಳು ಹೊಟ್ಟೇ ಪಾಡಿಗಾಗಿ ಒಂದು ಚಾಕ್ರೀಗೆ ಸೇರಿ

ಕೊಂಡಿದ್ದಾರೆ. ದೇವರವರಿಗೆ ಕೊಟ್ಟಿಲ್ಲ. ನಿನಗೆ ಕೊಟ್ಟಿದ್ದಾನೆ. ಅರಳೀಮರಾನಾಶ್ರಯಿಸಿ ಬಡ ಹಕ್ಕಿಗಳು ಜೀವಿಸೋ ಹಾಗೆ ನಿನ್ನನ್ನಾಶ್ರಯಿಸಿ ಅವರು ಜೀವಿಸ್ತಿದ್ದಾರೆ. ನಿನಗೂ ಅವರಿಗೂ ಕೊಡೋ ದಾತ ಒಬ್ನೇ ಅಲ್ವೇ? ಅವರ ವಿಚಾರದಲ್ಲಿ ನೀನಿನ್ನೂ ದಯೆ ತೋರಿಸ್ಬೇಕು ದೊಡ್ಡಪ್ಪಾ.

(ತೆರೆಯ ಒಳಗೆ)

**ತೋರ—** ಅಯ್ಯೋ ನಮ್ಮಪ್ಪಾ! ನಮ್ಮ ಭಾಗದ್ದೇವ್ರೇ! ನಿನ್ನ ಹೊಟ್ಟೆ ತಣ್ಣಗಿರ್ಲಪ್ಪಾ. ಇಂಥಾ ಹಾಳ್ಕಾಲ್ದಲ್ಲೂ ಧರ್ಮರಾಯ ನಂಥಾ ಮಾರಾಯ ನೀನಾದ್ರೂ ಒಬ್ಬ ಇರೋ ಹೊತ್ಗೇ ಒಸಿ ಯಾದ್ರೂ ಮಳೆ ಬೆಳೆಯಾಗ್ತೈತೆ. ಶಿವ ನಿಂಗೆ ನೂರು ವರ್ಸ ಆಯುಸ್ಕೊಟ್ಟು ಚಂದಾಕಿರಸ್ಲಪ್ಪಾ! (ನಂಜಮ್ಮ ಎರಡು ಲೋಟ ಗಳಲ್ಲಿ ಕಾಫಿಯನ್ನು ತಂದು ಮುಂದಿಡುವಳು)

**ಗಂಗಾಧರ—** (ಕಾಫಿಯನ್ನು ಕುಡಿಯುತ್ತಾ) ಚೆನ್ನಾಗಿದ್ದೀರಾ ನಂಜ ಮ್ನೋರೇ?

**ನಂಜಮ್ಮ—** ಏನೊ ಇಷ್ಟರಮಟ್ಟಿಗಿದ್ದೇನಪ್ಪಾ. ನೀವು ಹುಷಾರಾಗಿ ದ್ದೀರಾ? ಯಾವಾಗ ಬಂದದ್ದು?

**ಗಂಗಾಧರ—** ಚೆನ್ನಾಗಿದ್ದೇನಮ್ಮ–ಕಲ್ಲು ಗುಂಡು ಇದ್ದ ಹಾಗಿದ್ದೇನೆ. ಮುಖ್ಯ ನಿಮ್ಮೆಲ್ಲರ ವಿಶ್ವಾಸ. ಇಗೊಳ್ಳಿ ಈಗ್ತಾನೆ ಬರ್ತಾಯಿದ್ದೇನೆ. ಹಾಳು ಬಸ್ಸು ಪ್ರಯಾಣ; ಆಯಾಸ ಹೆಚ್ಚು–ತಿಂಡೀ ಕಡಿಮೆ–ಕಂಡ್ರಾ, ಅದಕ್ಕೇ ಇಷ್ಟು ಬಡವಾಗಿ ಹೋಗಿರೋದು. ನೋಡೀ ಇಲ್ಲಿದ್ರೆ ಸುಲಭವಾಗಿ ಸೇರಕ್ಕೆ ಇಳಸ್ತೀನಿ. ಬೆಂಗಳೂರ್ಗೆ ಹೋದ್ರೆ ಅರ್ಧಪಾವು ಕೂಡ ಇಳಿಯೋ ಹಾಗಿಲ್ವಲ್ಲಾ—ಮರ್ತಿದ್ದೆ ಇವತ್ತು ಸ್ವಲ್ಪ ಜೋರಾಗಿರಬೇಕು ಊಟ–ಹಿತ್ತಲ್ಲಿ ಬೂದುಗುಂಬಳಕಾಯಿ ಇದ್ಯೇನೋ ನೋಡಿ. ಒಳ್ಳೆ ಮೊಸರು ಹಾಕೋದ್ಮರೀಬ್ಯಾಡಿ–ಬೆಂಗಳೂರು ಹೋಟಲ್ ಮಜ್ಜಿಗೆ ತಿಂದೂ ತಿಂದೂ ತಲೆ ಬೇಜಾರು

ಹಿಡಿದ್ಹೋಗಿದೆ. ಮನೆ ಮೊಸರೆಲ್ಲಾ ಇವತ್ತು ನಂಗೇ ಹಾಕ್ಬೇಕು-ತಿಳೀತೋ.

**ಸಂಜಮ್ಮ**— ಸಂತೋಷ. ನೀವು ತಿನ್ನೋ ಅಷ್ಟು ಹಾಕ್ತೇನೆ. ದೇವರು ಯಾವದಕ್ಕೂ ಕಡಿಮೆ ಮಾಡಿಲ್ಲ (ನಿಷ್ಕ್ರಮಿಸುತ್ತಾ ಆತ್ಮಗತ) ಎಂಥಾ ರತ್ನದಂಥ ಹುಡುಗ. ದಿಕ್ಕು ದಿವಾಳಿಯಿಲ್ದ ಬಡವೆ! ನನ್ನ್ಯೋಗಕ್ಷೇಮ ಕೂಡ ಹೊಟ್ಟೇಲಿ ಹುಟ್ಟಿದ ಮಗನಿಗಿಂತಲೂ ಹೆಚ್ಚಾಗಿ ವಿಚಾರಿಸಿದ ಮಾರಾಯ! ಇಂಥಾ ಮಗನ್ನ ಹೆತ್ತ ತಾಯಿ ಹೊಟ್ಟೆ ತಣ್ಣಗಿರಲಿ.

**ಗಂಗಾಧರ**— (ದೊಡ್ಡಪ್ಪನ ಕಡೆ ತಿರುಗಿ) ಆಕೆಯದೆಂಥಾ ಸರಳ ಸ್ವಭಾವ ದೊಡ್ಡಪ್ಪ! ನಾನು ನಾಲ್ಕು ಒಳ್ಳೇಮಾತಾಡಿದ್ದಕ್ಕೇ ಆಕೆಗಾದ ಆನಂದ ನೀನು ನೋಡಲಿಲ್ಲ. ಒಳ್ಳೇ ಮಾತಾಡೋದಿಕ್ಕೆ ನಮ್ಮ ತಾತನ ಮನೆ ಗಂಟೇನು ಹೋಗತ್ತೆ ದೊಡ್ಡಪ್ಪಾ!

**ಶೇಷಗಿರಿ**— (ಕುಪಿತನಾಗಿ) ಗಂಗೂ! ಇದೇ ಮೊದಲು ಇದೇ ಕೊನೆ. ಇನ್ಮೇಲೆ ನನಗೀ ಉಪದೇಶ ಬೇಕಿಲ್ಲ. ಬೆಂಗಳೂರ್ಗೆ ಹೋಗಿ ನಾಲ್ಕು ಇಂಗ್ಲೀಷು ಮಾತು ಕಲ್ತಾಕ್ಷಣ ನೀನೇನೂ ಬೃಹಸ್ಪತಿ ಮೊಮ್ಮಗ ನಾಗ್ಲಿಲ್ಲ-ನನಗೂ ಸ್ವಲ್ಪ ಇಂಗ್ಲೀಷು ಬರತ್ತೆ-ಕೆಲ್ಸಕ್ಕೆ ಬಾರ್ದೇಯಿದ್ದ ಜವಾನ್ರಿಗೆಲ್ಲಾ ಮರ್ಯಾದೆ ತೋರಿಸ್ಬೇಕಂತೆ-ಒಳ್ಳೇ ಮಾತ್ನಾಡ ಬೇಕಂತೆ - ದಯೆ ತೋರಬೇಕಂತೆ! ನೀನೇನೋ ಮಹಾ ಯೋಗ್ಯಾಂತಿದ್ದೆ. ಆಕೆ ಎದುರಿಗೆ ಹಾಗೆ ಚೆಲ್ಲಾಟಾ ಆಡ್ದೆಯಲ್ಲಾ! ಮಾನ ಮರ್ಯಾದೆ-ಘನತೆ ಸ್ವಲ್ಪವೂ ಬ್ಯಾಡ್ವೇ? ನೀನೆಲ್ಲಿ ಅವಳೆಲ್ಲಿ! ನೀನು ಮನೆಗೆ ಎರಡನೆ ಯಜಮಾನ. ಅವಳು ಅಡಿಗೆ ಕೆಲಸ ಮಾಡ್ಕೊಂಡು ಬಿದ್ದಿರೋ ಕೂಲಿ ಹೆಂಗಸು. ಪೂರ್ವ ಜನ್ಮದಲ್ಲಿ ಎಷ್ಟು ಪಾಪಮಾಡಿ, ಏನು ಮಾಡ್ಬಾರದ್ನೆಲ್ಲಾ ಮಾಡಿ ದಳೋ ಈಗ ವಿಧವೆಯಾಗಿದ್ದಾಳೆ. ಅಂಥಾ ಚಂಡಾಲ ಹೆಂಗಸನ್ನ ಮನೇ ಅಕ್ಕತಂಗಿಯರ್ನ ಮಾತಾಡಿಸೋ ಹಾಗೆ ಮಾತಾಡಿಸ್ಬಹುದೇ?

**ಗಂಗಾಧರ**— ದೊಡ್ಡಪ್ಪಾ-ನಂಗೆ ಆ ಭೇದ ತಾರತಮ್ಯಗಳೊಂದೂ ಗೊತ್ತಿಲ್ಲ: ನಿಮ್ಮ ಜಾತಿ ರೀತಿ ಮತಗಳ ನಡವಳಿಕೆಗಳೊಂದೂ ಗೊತ್ತಿಲ್ಲ. ನಿಮ್ಮ ಘನತೆ ಮರ್ಯಾದೆ ಡಬಡ್ಡಾಳಿಕೆಗಳೊಂದೂ ಅರ್ಥವಾಗಲ್ಲ. ಹೆಂಗಸ್ರೆಲ್ಲಾ ನನಗೆ ಅಕ್ಕ ತಂಗೀರೇ. ಗಂಡಸ್ರೆಲ್ಲಾ ನನ್ನ ಅಣ್ಣತಮ್ಮಂದಿರೇ. ಅವರು ನಮಗೇನನ್ಯಾಯಮಾಡಿದಾರೆ ದೊಡ್ಡಪ್ಪ, ಹೀಗೆ ನಿಷ್ಕಾರಣವಾಗಿ ಬೈಗಳ ಮಳೆ ಸುರಿಸೋಕೆ? ಕೊಡೋ ಜೀತಕ್ಕೆ ರಟ್ಟೆ ಮುರಿದು ಚಾಕರೀ ಮಾಡೇ ಮಾಡ್ತಾರೆ. ಎಲ್ಲರೂ ನಮ್ಮ ಹಾಗೇ ದೊಡ್ಡಪ್ಪಾ. ನಾವು ಹೆಚ್ಚೇನು, ಅವರು ಕಡಿಮೆಯೇನು?

**ಶೇಷಗಿರಿ**— ಮುಖ್ಯ ನಮ್ಮ ತಪ್ಪು. ನಿನ್ನ ಆ ಹಾಳು ಇಂಗ್ಲೀಷ್ ಓದೋಕೆ ಬೆಂಗಳೂರಿಗೆ ಕಳುಹಿಸ್ದೇಯಿದ್ರೆ ನೀನು ಹೀಗೆ ಕೆಟ್ಟು ಹಾಳಾಗ್ತ ಇರ್ಲಿಲ್ಲ. ಇನ್ನೇನು ಮಾಡೋದು! ಕೈಮೀರಿ ಹೋಯಿತು! ಚಿಕ್ಕೋನು ದೊಡ್ಡೋನಾದೆ-ರೆಕ್ಕೆಗಳು ಬಲೀತು-ಕೊಬ್ಬಿದೆ. ಈಗ ಗುರುವಿಗೇ ತಿರುಮಂತ್ರ ಹೇಳ್ತಾಯಿದ್ದೀ! ಕಾಲ ಹೀಗೇ ತಾನೇ. ಇರ್ಲಿ ಇರ್ಲಿ ಬದುಕಿದ್ರೆ ನಾನು ನೋಡ್ದೇ ಹೋಗ್ತೇನ್ಯೆ? ಈ ನೀತಿ-ಈ ಧರ್ಮ-ಈ ದಯೆ ಇನ್ನೆಷ್ಟು ದಿನ ಇರತ್ತೆ ಅನ್ನೋದ್ನ. ಸಂಸಾರದ ಕಷ್ಟಸುಖ ಕಂಡ್ರೆ ಆಗ ಗೊತ್ತಾಗತ್ತೆ. ಈ ನೀತಿ ಚಿಂತಾಮಣಿಯೆಲ್ಲಾ ಆವಾಗ ಸಾಗರ ಪಾಲಾಗತ್ತೆ! ಅಪ್ಪಾ ತಿಳಿದುಕೋ, 'ಬಯ್ದು ಹೇಳ್ದೋನು ಬದುಕ ಹೇಳಿದ, ಹೊಗಳಿ ಹೇಳ್ದೋನು ಹಾಳಾಗ ಹೇಳಿದ' ಅನ್ನೋ ಹಾಗೆ ಬದ್ಕೋ ಮಾರ್ಗ ತಿಳಿದ್ಕೊಂಡು ಬುದ್ಧಿವಂತನಾಗಿರು. ಇನ್ಮೇಲೆ ಹೀಗೆಲ್ಲಾ ಹುಚ್ಚು ಹುಚ್ಚಾಗಿ ಆಡಬೇಡ.

**ಗಂಗಾಧರ**— (ಆತ್ಮಗತ) ಸುಮ್ನೆ ಯಾಕೆ ಬಂದ ದಿನಾನೇ ದೊಡ್ಡಪ್ನ ಹತ್ರ ವ್ಯಾಜ್ಯ (ಪ್ರಕಾಶ) ನಾನೆಷ್ಟಾದ್ರೂ ಹುಡುಗ. ಕೋಪಿಸ್ಕೊಬೇಡ ದೊಡ್ಡಪ್ಪ. ಹಿಂದಿನದೆಲ್ಲಾ ಒಳ್ಳೇ ಪದ್ಧತಿಯಂತ ಹೇಳೋಕಾಗೋದಿಲ್ಲ-ಹೋಗಲಿ ಆ ಮಾತು ಬಿಡು-ಯಾವದೋ

ಕಾಷ್ಟವ್ಯಸನ ಹಚ್ಚಿಕೊಂಡು ನಾವ್ಯಾಕೆ ಮನಸ್ತಾಪ ಕಟ್ಕೋ ಬೇಕು.

**ಶೇಷಗಿರಿ**— ಇದೀಗ ಸರಿ. ಹಾಗ್ತಾನೆ ಇರಬೇಕು ಹುಡುಗರು. ಸುಮ್ಮನೆ ಚರ್ಚೆ ಯಾಕೆ? ಕಾಲ್ತೊಳ್ಕೋ ಏಳು–ಹಸಿದು ಬಂದಿದ್ದಿ ಬ್ರಾಹ್ಮಣ! ಅಯ್ಯೋ ಹುಚ್ಚಾ ಹುಚ್ಚಾ! ಎಷ್ಟು ಕಲ್ತುಬಿಟ್ಯೋ ಗಂಗೂ, ನನ್ನೆದುರಿಗೆ ಹುಟ್ಟಿದೋನು–ನನ್ನೆದುರಿಗೆ ಬೆಳೆದೋನು–ಆಗಲೇ ಎಷ್ಟು ಕಲ್ತುಬಿಟ್ಯೋ?

**ಗಂಗಾಧರ**— ಬೇಗ ಬಾ ದೊಡ್ಡಪ್ಪ. ನಾನು ಎಲೇ ಗಿಲೇ ಹಾಕಸ್ತಾ ಇರ್ತೀನಿ (ನಿಷ್ಕ್ರಮಣ)

**ಶೇಷಗಿರಿ**— ಇದ್ಯಾಕೋ ಚೆನ್ನಾಗಿ ಕಾಣೋದಿಲ್ಲ. ನಾನು ಏತಿ ಅಂದದ್ದಕ್ಕೆಲ್ಲಾ ಇವನು ಪ್ರೀತಿ ಅಂತಾ ಹೋದ್ರೆ ಬಹುನಾಯಕ ಹಾಳ್ಯವಾಗಿ ಈ ಮನೇಲಿ ಬಾಳೋದೇ ಕಷ್ಟವಾಗುತ್ತೆ. ಈಗಿನ ಕಾಲದ ಹುಡುಗರಿಗೆಲ್ಲಾ ಇದೊಂದು ರೋಗ. ಹಿರಿಯರಲ್ಲಿ ಸ್ವಲ್ಪವೂ ಗೌರವವಿಲ್ಲ. ಪೂರ್ವ ಕಾಲದ ನಡತೆಯೆಂದರೆ ಅಸಡ್ಡೆ.– ನನ್ನ ವಿವಾಹ ಪ್ರಯತ್ನ ಗಂಗೂಗೆ ಗೊತ್ತಾದ್ರೇನು ಗತಿ! ಈ ಮನೇಲೀಗ ಗೋಡೆಗಳಿಗೂ ಕಿವಿಗಳು ಬಂದುಬಿಟ್ಟಿವೆ. ಅವಧಾನಿ ಬಾಯಿಗೀಯೀ ಬಿಟ್ಟಾನೋ! – ಛೆ! ಛೆ! ಅವನೆಲ್ಲಾದ್ರೂ ಬಿಡ್ತಾನ್ಯೆ—ಅವನ ಬಾಯಿಗೇ ಮಣ್ಣುಬೀಳತ್ತಷ್ಟೆ—ಹೇಗಾದರೂ ಹುಷಾರಾಗಿರೋದು ವೋಲು (ಒಳಗಿನಿಂದ ಗಂಗಾಧರ ಕರೆಯುವನು) ಬಂದೇ ಗಂಗೂ-ಬಂದೇ ಪರಿಷಂಚನೆ ಮಾಡು (ಆತ್ಮಗತ) ಅನ್ನ ಯಾರಿಗ್ಬೇಕು–ನೀರು ಯಾರಿಗೆಬೇಕು–ಮದ್ವೇ ಹುಚ್ಚು ಹಿಡಿದಮೇಲೆ–ಊಟದ ಶಾಸ್ತ್ರ ಮಾಡ್ತೀನಿ-(ನಿಷ್ಕ್ರಮಣ)

---

## ದೃಶ್ಯ ೨.

(ಶೇಷಗಿರಿರಾಯನ ಮನೆಯ ಮುಂಭಾಗ. ಗಂಗಾಧರ ವೃತ್ತಪತ್ರಿಕೆ ಓದುತ್ತಾ ಕುಳಿತಿರುವನು)

**ಗಂಗಾಧರ**— ಇದೇನು ಮನೆಯೋ ದೇವರೇ ಬಲ್ಲ! ಒಂದು ಲೈಬ್ರರಿ ಇಲ್ಲ. ಒಂದು ಹೊಸ Newspaper ಇಲ್ಲ! ಹೋಗಲೀಂದ್ರೆ ಒಂದು ನಾಲ್ಕು ಕಥೆಪುಸ್ತಕಗಳು ಕೂಡಾ ಇಲ್ಲ. ಈ ಹಾಳು ಹಳ್ಳೀಲಿ ಹೊತ್ತು ಹ್ಯಾಗೆ ಕಳೀಬೇಕೋ ದೊಡ್ಡ Problem! ದೊಡ್ಡಪ್ಪಂಗೇನು ಬರಾ–ಒಂದೆರಡು ಪೇಪರ್, ಒಂದೆರಡು Magazines ತರ್ರ್ಸೋಕೆ? ದುಡ್ಡಿರೋರೆಲ್ಲಾ ಹೀಗೆ ಲೋಭಿಗಳಾಗ್ತಾ ಬಂದ್ರೆ Local enterprises ತಲೆಯೆತ್ತೋದು ಹ್ಯಾಗೆ? ಇನ್ನು ಹತ್ತು ಶತಮಾನಗಳಾದರೂ ನಮ್ಮ ಜನರ ಬಾಳು ಬೇರೆ ಬದಲಾಯಿ ಸೋಹಾಗಿಲ್ಲ. ನಮ್ಮಪ್ಪ ಇದ್ಮ್ಯಾಡ್ಡಾ, ನಮ್ಮಜ್ಜ ಆದ್ಮ್ಯಾಡದ ಅಂತ ಲಲ್ಲೀ ಹೊಡೀತಾರ್ಯೇವಿನಾ 'ಎಲಾ ನಾನೇನ್ಮ್ಯಾಡ್ದೆ—ನಾನೇನು ಮ್ಯಾಡೋಕೆ ಸಾಧ್ಯಾ'ಂತ ಮಾತ್ರ ಯೋಚಿಸೋದಿಲ್ಲ! ಮದುವೆ, ಮುಂಜಿ ಹಬ್ಬ ಹರಿದಿನಗಳು, ವ್ರತಗಳೂಂದ್ರೆ ಬಚ್ಚಲು ನೀರು ಹರಿ ಯೋಹಾಗೆ ಹರ್ರ್ಸೋಕೆ ದುಡ್ಡಿದೆ. ಆದ್ರೆ ಒಂದು Noble causeಗೆ ಸಹಾಯಮಾಡೋಕ್ಮ್ಯಾತ್ರಾ ಕೈಲಿ ಕಾಸಿರೋದಿಲ್ಲ—ಎಂದೂ ಇಲ್ದ Bank Deposit ಬಂದು ಬಿಡೋದಾಗ್ಲೇ-Cheque Book ನ Leaves ಎಲ್ಲಾ ಮುಗಿದು ಹೋಗಿರೋದಾಗ್ಲೇ-ಹೆಣ್ಣು ಮಕ್ಳೆಲ್ಲಾ ಬಾಣಂತನಕ್ಕೆ ಬರೋದಾಗ್ಲೆ–ಅಪ್ಪಾ ಅಮ್ಮನ ತಿಥಿಗಳು ಬರೋದಾಗ್ಲೇ–ತಾಪತ್ರಯಗಳೆಲ್ಲಾ ಒಟ್ಟೊಟ್ಟಿಗೆ ಆಗ್ಲೇ ಬಂದು ಬಿಡತ್ವೆ! ಇಷ್ಟರಮೇಲೆ ಅಪ್ಪಿತಪ್ಪಿ ಯಾವನಾದರೂ ಮೂರ್ಕಾಸು ಕೊಟ್ಟನೋ ಮಾರನೆಯದಿವಸವೇ News-papersನಲ್ಲೆಲ್ಲಾ ಅವನ Photo, ಅವನ Munificient charity ಯ ಪೂರ್ವೇತಿ ಹಾಸವೆಲ್ಲಾ ಬಂದುಬಿಡಬೇಕು. ಸಾಲದ್ದಕ್ಕೆ ಒಂದು ರಾವ್ ಬಹದ್ದೂರ್‌ಗಿರಿಯೋ ಧರ್ಮಪ್ರಕಾಶತ್ವವೋ ಬಂದುಬಿಡಬೇಕು.

God, depart from us soon' ಅಂತಾ ಒಂದು ಗಾದೆಯಿದೆ. ಹಾಗಂದ್ರೆ - 'ಪರಮಾತ್ಮನಿಗೆ ಸಂಪ್ರೀತರಾದವರು ನಮ್ಮಿಂದ ಬೇಗ ಹೊರಟುಹೋಗ್ತಾರೇ'ಂತ. ಹಾಗ್ತಿಳ್ಕೊಂಡು ನಾವು ದುಃಖ ನೀಗಿಕೋಬೇಕು ತಾಯಿ. ಇರಲೀ—ನೀವು ಬಂದ ವಿಚಾರ ತಿಳಿಸ್ಲೇ ಇಲ್ಲವಲ್ಲಾ—

**ನಂಜಮ್ಮಾ**— ಅದೂ ಹೇಳಿ ನಿಮ್ಮನಷ್ಟು ಯಾಕೆ ನೋಯಿಸ್ಲಪ್ಪಾ. ಮುಖ್ಯ ನಮ್ಮ ಅದೃಷ್ಟ.

**ಗಂಗಾಧರ**— ಅಮ್ಮ, ಹಾಗಲ್ಲ. ನಿರ್ವಂಚನೆಯಾಗಿ ನೀವು ನನ್ನಲ್ಲಿ ಹೇಳಲೇಬೇಕು. ನನ್ನ ಕೈಯಲ್ಲಿ ಸಾಧ್ಯವಾಗುವ ಪಕ್ಷಕ್ಕೆ ಖಂಡಿತ ವಾಗಿಯೂ ಮಾಡಿಕೊಡ್ತೇನೆ. ಹೇಳಿ, ಸಂಕೋಚವಿಲ್ದೆ ಹೇಳಿ.

**ನಂಜಮ್ಮಾ**— ಈ ಮನೆ ಅಡಿಗೆ ಕೆಲ್ಸಕ್ಕೇಂತ ನಾನ್ಬಂದು ನಾಳೇ ಕಾರ್ತೀಕಕ್ಕೆ ಒಂದು ವರ್ಷವಾಯ್ತು. ನಿಲ್ಲೋಕೆ ನೆರಳಿಲ್ದೆ, ತಿನ್ನೋಕೆ ಅನ್ನವಿಲ್ದೆ ಬಂದ ಪರದೇಶಿಗೆ ಆಶ್ರಯ ಕೊಟ್ಟ ಮಾರಾಯನಿಗೆ ಎರಡು ಬಗೆಯಬಾರದು. ಆದರೂ-ನೋಡಿಯಪ್ಪಾ! ದೇವರು ನಮಗೂ ಅಲ್ಪ ಸ್ವಲ್ಪ ಕೊಟ್ಟಿದ್ದ-ಅವರು ತೀರ್ಕೊಂಡ ಮೇಲೆ ಎಲ್ಲಾ ವೈದಂದರ ಯಜಮಾನಿಕೇಗೆ ಬಂತು. ಒಂದು ಭಾಗ ಶಾಮೂಗೆ ತೆಗೆದಿಟ್ಟಿದ್ದೀನೀಂತ ಹೇಳೀ ಹೇಳಿ ಎಲ್ಲಾನೂ ಮೂರೆಲೆ ಆಟ್ದಲ್ಲಿ ಕಳ್ದುಬಿಟ್ಟರು ಕುಡಿಯೋದು ಬೇರೆ ಬಂತು ಜೊತೆಗೆ, ಹೀಗಾಗಿ ತಾವು ಭಿಕಾರಿಯಾದ್ದಲ್ದೆ, ಶಾಮೂ ತೀರ್ಕೊಂಡ ಮೇಲೆ, ನನ್ನ ಮನೆ ಬಿಟ್ಟೋಡ್ಸಿ ನನ್ನೂ ಪರದೇಶಿ ಮಾಡ್ಬಿಟ್ರು. ಈ ಮಾರಾಯ ಆಶ್ರಯಕೊಟ್ಟು ತಿಂಗಳಿಗೆ ೮ ರೂಪಾಯಿ ಸಂಬಳಾಂತ ಗೊತ್ತುಮಾಡಿದ್ರು. ಮೊದಲ್ನೆ ತಿಂಗಳು ಸಂಬಳಾ ಕೊಟ್ಟು ಎರಡನೇ ತಿಂಗ್ಳಿಂದ ಬ್ಯಾಂಕಿಗೆ ಹಾಕ್ತೇನೀಂತ ಹೇಳಿ ಇದು ವರೆಗೆ ಮೂರ್ಕಾಸೂ ಕೊಟ್ಟಿಲ್ಲ. ನನಗೆ ದುಡ್ಡಿನ ಅಗತ್ಯವೂ ಇರ್ಲಿಲ್ಲ-ಸುಮ್ನೇನೆ ಇದ್ದೆ—ಮೊನ್ನೆ ನವರಾತ್ರೀಲಿ ಋಷಿಪಂಚಮಿ

ಉದ್ಯಾಪನೆ ಬಂದಾಗ ಒಂದಿಪ್ಪತ್ತು ರೂಪಾಯಿ ಬೇಕೊಂತ ಕೇಳಿದ್ದಕ್ಕೆ ರೇಗ್ಕೊಂಡು ಹೊಡೆಯೋಕೇಬಂದ್ರು. ಅಪ್ರೂಭಟ್ರು ಒಳ್ಳೆಯರಾಗೋ ಹೊತ್ತಿಗೆ ವ್ರತ ನಿಷ್ಫಲವಾಗ್ಲಿಲ್ಲ. ಈ ಅಮಾವಾಸ್ಯೆ ಕಳೆದು ಬರೋ ತ್ರಯೋದಶೀಗೆ ನಮ್ಮ ಶಾಮೂ ಸತ್ತು ಎರಡು ವರ್ಷ. ಶಾಮೂಗೆ ಶಾವಿಗೆ ಪಾಯಿಸ–ಹಣ್ಣೂ ಹಂಪಲೂಂದ್ರೆ ಬಹು ಪ್ರೀತಿ. ಸಾಯೋಕೆ ಕೆಲವು ದಿವಸಕ್ಕೆ ಮುಂಚೆ 'ಅಮ್ಮ-ಚಮಕಿ ಟೋಪಿ ಮಾಡಿಸ್ಕೊಡೇ-ಚಮಕಿ ಟೋಪಿ ಮಾಡಿಸ್ಕೊಡೇ' ಎಂದು ಕೇಳ್ತಾಯಿದ್ದ - ತ್ರಯೋದಶೀದಿವ್ಸ ನಾಲ್ಕು ಹುಡುಗರ್ನ ಕರೆದು ಶಾವಿಗೆ ಪಾಯಿಸದ ಅಡಿಗೇ ಮಾಡಿ ಹಾಕಿ ತಿನ್ನೋಕೆ ತುಂಬಾ ಹಣ್ಣೂ ಹಂಪಲೂ ಕೊಟ್ಟು-ಶಾಮೂ ಹೆಸರ್ನಲ್ಲಿ ಒಂದೊಂದು ಚಮಕೀ ಟೋಪಿ ಕೊಡೋಣಾಂತ ಮಾಡ್ಕೊಂಡಿದ್ದೀನಿ. ಮುಂದೇನಾದ್ರೂ ದುಡ್ಡುಗಿಡ್ಡು ಮಿಕ್ರೆ ಕಾಶೀಯಾತ್ರೆ ಮಾಡೋಣಾಂತಲೂ ಇದೆ ಸಂಕಲ್ಪ. ನೋಡ್ಬೇಕು ನಮ್ಮಪ್ಪ ವೆಂಕಟಾಚಲಪತಿ ಅನುಗ್ರಹ ಹ್ಯಾಗಿದೆಯೋ ? ಮನಸ್ಸೊಂದು ಚೆನ್ನಾಗಿದ್ರೆ ಎಲ್ಲಿದ್ರೂಲ್ಲೇ ಕಾಶಿ. ಎಲ್ಲಿಮಿಂದರಲ್ಲೇ ಗಂಗಾ ಪುಣ್ಯ ಸಿಕ್ಕುತ್ತೆ - ನೀವು ಕೊಂಚ ಮನಸ್ಮಾಡಿದ್ರೆ ನನ್ನ ಇಷ್ಟಾರ್ಥ ನೆರವೇರತ್ತೆ.

**ಗಂಗಾಧರ**— ಅಮ್ಮ, ಆ ವಿಚಾರ ನನಗ್ಬಿಡಿ, ನೀವು ನಿಶ್ಚಿಂತರಾಗಿರಿ. ನಿಮ್ಮ ದುಡ್ಡು ನಾನು ಕೊಡಸ್ತೇನೆ. ನೀವು ಯೋಚನೆ ಮಾಡ್ದೆ ನಿರಾಂತಕವಾಗಿರಿ-ಹೊಂ ! ಮರ್ತಿದ್ದೆ—ಆ ನಾಲ್ಕು ಹುಡುಗರಲ್ಲಿ ನಾನೂ ಒಬ್ಬ-ಮರಿಬ್ಯಾಡಿ—

**ನಂಜಮ್ಮ**— ಈ ಜನ್ಮವಿರೋವಿರೆಗೂ ನಿಮ್ಮುಪಕಾರ ಮರಿತೇನ್ಯೇ ? ಇನ್ನಾನ್ಬರ್ತೀನಪ್ಪಾ. (ನಿಶ್ಕ್ರಮಿಸುತ್ತಾ ಅಶ್ವಗತ) ನನ್ರಾಜಾ ತಣ್ಣಗೆ ಬಾಳು. ನನ್ರತ್ನಾ, ಹೀಗೆ ದಿಕ್ಕಿಲ್ದ ಬಡವರ ದುಃಖ ನಿವಾರಣೆ ಮಾಡು. ಅಮೃತದಂಥಾ ಬಾಯಿ, ಚಿನ್ನದಂಥಾ ಹೃದಯ-ನಮ್ಮಪ್ಪಾ ಚೆನ್ನಾಗಿ ಬಾಳು.

## ದೃಶ್ಯ ೩

[ರಾಮೂವಧಾನಿ ಮನೆ, ಗೋಡೆಯಮೇಲೆ ಹರುಕು ಮುರುಕು ರವಿವರ್ಮನ ಪಠಗಳಿವೆ. ನೆಲದ ಮೇಲೊಂದು ಚಾಪೆ. ಒಂದು ಕೊಳಕು ದಿಂಬು. ಚಾಪೆಯಮೇಲೆ ಕೆಲವು ಹಾಸಿಗೆ. ಒಂದು ಮುರುಕಲು ಬೆಂಚು. ಚಾಪೆಯಮೇಲೆ ಕೆಲವು ಪುಸ್ತಕಗಳು ]

**ರಾಮೂವಧಾನಿ**— (ಒಂದು ಗಂಟನ್ನು ಹೊತ್ತುಕೊಂಡು ಗುಣಿಗೆ ಹಾಕುತ್ತಾ ಪ್ರವೇಶಿಸಿ ಚಾಪೆಯಮೇಲೆ ಗಂಟನ್ನಿಳುಹಿ ಉತ್ತರೀಯದ ಕೊನೆಯಿಂದ ಗಾಳಿಬೀಸಿಕೊಳ್ಳುತ್ತಾ) ಸುಖವಿಲ್ಲ. ಹಾಳು ಪ್ರಪಂಚ ದಲ್ಲಿ ಸುಖವಿಲ್ಲ. ಏನು ಕೈಹಿಡಿತ. ಏನು ಕೃಪಣತ್ವ! ಖರ್ಚು ಮಾಡೋ ಇಂಥಾ ಕಾಲಗಳಲ್ಲಿ ಕೂಡಾ ಖರ್ಚುಮಾಡ್ದೇ ಹೋದ್ರೆ ಇನ್ನ್ಯಾವಾಗ ಇವರೆಲ್ಲಾ ಮಾಡೋದು? ಈ ಲೌಕೀಕರ ಆಶ್ರಯ ದಲ್ಲಿ ಬಡಪಾಯಿಗಳು, ನಮ್ಮ ಜೀವನ ಕಳೆದ್ಹೋಗ್ತಿದೆ. ಹೀಗೆ ವರೂ ಹಿಡತಾಮಾಡ್ತಾ ಬಂದ್ರೆ ಹೊಟ್ಟೇಮೇಲೆ ನಾವೆಲ್ಲಾ ಒದ್ದೆ ಬಟ್ಟೆ ಹಾಕ್ಕೊಳ್ಳೋದೆ! ಏನು ಹಾಳು ಕಾಲವಪ್ಪಾ—ಏನು ಹಾಳು ಕಾಲ! ಕಲಿಗಾಲ್ದ ಪ್ರಥಮ ಪಾದ್ದಲ್ಲೇ ಇಷ್ಟು ಅತ್ಯಾಚಾರ ಗಳ್ನಡದ್ರೆ ಮುಂದೇನ್ಗತಿ? ದೇಶದಲ್ಲಿ ದುರ್ಭಿಕ್ಷ ತಪ್ಪೇಕೊಂದ್ರೆ ಹ್ಯಾಗೆ ತಪ್ಪೀತು? ಅದಕ್ಕೇ ರೂಪಾಯ್ಗೆ ನಾಲಕ್ಸೇರಕ್ಕಿ—ಹತ್ಸೇರು ರಾಗಿಯಾಗಿರೋದು. ನಮ್ಮಯ್ಯನ ಕಾಲ್ದಲ್ಲಿ ನಾಕಂಡ್ಹಾಗೆ ಒಂದು ರೂಪಾಯ್ಕೊಟ್ರೆ ೪೫—೫೦ ಸೇರಕ್ಕಿ ಧಾರಾಳ್ವಾಗಿ ಕೊಡ್ತಿದ್ರು— ಒಂದು ಖಂಡಗ ರಾಗಿ—ಒಂದು ಧಡಿಯಾ ತುಪ್ಪ—ಒಂದ್ಮಣಾ ಹುಣಸೇಹಣ್ಣು! ನಮ್ಮಂಥ ಸದ್ಬ್ರಾಹ್ಮಣರನ್ನ ಕಂಡ್ರೆ ಎಷ್ಟು ವಿಶ್ವಾಸ; ಎಷ್ಟು ಮರ್ಯಾದೆ. ಈಗೇನು? ಬಾಯಿಬಿಟ್ಟು ಕೇಳಿದ್ರೂ ಮೂರ್ಕಾಳುಪ್ಪು ಹುಟ್ಟೋದಿಲ್ಲ. ನನ್ಕಾಲಕ್ಕೇ ಪ್ರಪಂಚ ಹೀಗಾದ್ರೆ ಇನ್ನು ನಮ್ಮ ಸುಬ್ಬು ಕಾಲಕ್ಕೇನ್ಗತಿ?!! ಅವ ನ್ಗೊಂದ್ಮದ್ವೆ ಮಾಡಿ ನಾನು ಸತ್ತುಬಿಟ್ರೆ ನನ್ನೈಲ್ಸ ಪೂರ್ತಿಸ್ತು ಜಾಣೆಯಾದ ಹೆಂಡ್ತಿ ಬಂದ್ರೆ ಸುಬ್ಬು ಬದಿಕ್ಕೊತಾನೆ. ಇಲ್ದೇ

ಯಿದ್ರೆ ಪರಮಾತ್ಮನೇ ಗತಿ—ಎಷ್ಟು ಹೇಳಿಕೊಟ್ರು ಬಾಯ್ಲಿ ಸರಿಯಾಗೊಂದು ಸಂಧ್ಯಾವನೆ ಮಂತ್ರಕೂಡಾ ಹೊರಡೋದಿಲ್ಲ. ಶುದ್ಧ ಮಡೆಯು. ಯಾವಾಗ್ನೋಡ್ಲೀ ಪವಿತ್ರದುಂಗ್ರ-ಸೀಬೇಕಾಯಿ; ಪವಿತ್ರದುಂಗ್ರ ಸೀಬೇಕಾಯಿ ತಾಯಿಲ್ದ ಮಗೂಂತ ನಾನು ದಂಡಿಸೋಕೆ ಹೋಗಿಲ್ಲ. ಅವಳ್ಗೀ ಅದ್ಕಂಡ್ರೆಬೆಂಕಿ. ಮುದ್ದಿಸಿ ಮುದ್ದಿಸೀ ಮಗನ್ನ ಮದ್ದು ಮಾಡ್ಕೊರ್ಸಿದ್ರೀಂತ ಮೂದಲಿಸ್ತಾಲೇ ಇರ್ತಾಳೆ. ಅವಳು ಹೇಳೋದೂ ನಿಜ್ವೇ. ಆ ಹಾಳ್ರಾಯ್ರ ಮನೆ ಮದ್ವೇ ಬಂದು ನಂಗೂ ಅವಳ್ಗೂ ಮನಸ್ತಾಪ. ಏನೋ ಒಂದ್ನಾಕೆಕರೆ ತರೀ ಜಮೀನು ಮಾಡೋಣಾಂತ ಸಾನಿದ್ರೆ ಅವುಳ್ದಾರ್ರ ಹೆಂಡ್ತಿ ಕಿವೀಲಿರೋ ಅಂಥಾ ವಜ್ರದ್ವಾಲೆಯೇ ಬೇಕಂತೆ-ಹಟ ಹಿಡಿದಿದ್ದಾಳೆ-ಅಲ್ಲಾ, ನಾ ಮಾಡೋದು ಪೌರೋಹಿತ್ಯ, ನನ್ನ ಹೆಂಡ್ತಿ ವಜ್ರದ್ವಾಲೆ ಇಟ್ಕೊಂಡ್ರೆ ಜನಗಳಾಡ್ಕೊಂಡು ನಗಾರೆ! ಉಭಯ ಸಂಕಟ-ಊ ಇರಲಿ ಬಂದ್ದೆಲ್ಲಾ ಅನುಭವಿಸಿಯೇ ತೀರಬೇಕು. (ಏಳುತ್ತಾ, ಸುತ್ತಲೂ ನೋಡಿ ಹೆಂಡತಿಯಾದ ಭಾಗೀರತಮ್ಮ ನನ್ನು ಕಾಣದೆ ತತ್ತರಿಸುತ್ತಾ) ಅವಳೆಲ್ಲೋ ಕಾಣೋದೇ ಇಲ್ವಲ್ಲಾ! ಹತ್ತು ಘಂಟೆ ಆಗೋ ಹೊತ್ತಾಯ್ತು! ಹೊಟ್ಟೆಗೇನಾದ್ರೂ ಅಷ್ಟು ಹಾಕ್ಕೊಂಡು ಮದ್ವೇ ಮನೆಗೆ ಹೋಗೋಣಾಂದ್ರೆ! ಎಲೇ-ಎಲೇ-ಏನ್ಮಾಡ್ತಾಯಿದ್ದೀಯೇ! ಎಲೇ!—

**ಭಾಗೀರತಮ್ಮ**— (ಒಳಗಿನಿಂದ) ಯಾಕ್ಹೀಗೆ ಒಂದೇ ಉಸುರಿಗೆ ಹೊಡ್ಕೋತೀರಿ ತಡೀರಿ ಬಂದೆ, ಎಲ್ಲೂ ಓಡಿಹೋಗಿಲ್ಲ. ಏನೇನು ಕಡ್ದು ಕಟ್ಟೆಹಾಕಿ, ಮೂಟೆ ಮೂಟೀಲಿ ತಂದಿದ್ದೀರೋ ನೋಡೋಣ. ಸಾಕಪ್ಪಾ ಸಾಕು. ಸ್ನಾನಮಾಡ್ಕೊಂಡು ಬರೋದ್ರೊಳ್ಗೇ ಅವಸರ.

**ಅವಧಾನಿ**— ಕೋಪಮಾಡ್ಕೋಬೇಡ್ವೇ. ನಿಂಗೆ ಕೇಳಿಸ್ಲಿಲ್ಲಾಂತ ೩-೪ ಸಲ ಕೂಗಿದೆ (ಆತ್ಮಗತ) ವಯಸ್ಸಾದ ಮೇಲೆ ಮದ್ವೆ ಮಾಡ್ಕೊಂಡೋರ ಪಾಡೆಲ್ಲಾ ಇಷ್ಟೇ! ಹೊರಗೆ ನವಾಬಗಿರಿ

ಮಾಡಿದ್ರೂ ಮನೆಗ್ಬಂದ ಮೇಲೆ ಹೆಂಡ್ತಿ ಅಡಿಯಾಳೇ, ಇದ್ದದ್ದರಲ್ಲಿ ನಾನೇ ಭಾಗ್ಯಶಾಲಿ-ಕಾಶೀನಾಥ ಶಾಸ್ತ್ರಿಗಳ ಕುಟುಂಬ ಕಾವೇರ ವ್ನೋರ ಹಾಗೆ ನಮ್ಮಾಕೆಯವರೂ ಕೈಗೆ ಹಗ್ಗ ಬಿಂದಿಗೆ ಕೊಟ್ಟಿಲ್ಲ. ಮನೆಬಿಟ್ಟು ಹೋಗೋಕೆ ಕೈಲಾಗದು. ಹೋಗ್ದೇ ಇದ್ರೋ ಸಂಪಾದ್ನೆಗೆ ಬೇರೆ ಮಾರ್ಗವಿಲ್ಲ. (ಪಕ್ಕಕ್ಕೆ ತಿರುಗಿ) ನಮ್ಮಾಕೆ ಯವರ ಸವಾರಿ ಹೀಗೆ ಚಿತ್ತೈಸ್ತಾಯಿದೆ.

(ಭಾಗೀರಥಮ್ಮ ಪ್ರವೇಶಿಸುವಳು. ವಯಸ್ಸಿನಲ್ಲಿ ಕಿರಿಯಳು. ಕೆನ್ನೆ ತುಂಬಾ ಅರಶಿನ-ಹಣೆ ತುಂಬಾ ಕುಂಕುಮ. ಧರಿಸಿರುವುದೊಂದು ಮಡೀಸೀರೆ)

**ಭಾಗೀರಥಿ**— ಏನ್ನಿಂತ್ಹೋಗಿತ್ತೂಂತ ಗಂಟ್ನ ಕಿತ್ಹೋಗೊ ಹಾಗೆ ಅರಚಿಕೊಂಡ್ರಿ. ಮಡೀ ಹುಡೀ ಒಂದೂ ಬ್ಯಾಡ್ವೇನು. ಬೆಳಗಾ ಗೆದ್ದು ನಿಮ್ಮುಂದೇನೇ ಕೂತಿರ್ಬೇಕು ! ಇದೇನು ? ಈಗಾಗ್ಲೇ ಬಂದುಬಿಟ್ರಿ-ಮದ್ವೇ ಕೆಲ್ಸಾಯೆಲ್ಲಾ ಪೂರಯಿಸ್ತೋ ಹ್ಯಾಗೆ. ಅದೇನು ಗಂಟು ?

**ಅವಧಾನಿ**— ಮಹಾರಾಯ್ತಿ ಹೀಗಟ್ಕೋಬೇಡ. ವಯಸ್ಸಾಯ್ತು-ನಂಗೆ ತಡ್ಕೊಳ್ಳೋಕೆ ಚೈತನ್ಯವಿಲ್ಲ ಜ್ಞಾಪಕಶಕ್ತಿ ಹೋಗ್ತಾಬಂತು, ದಯವಿಟ್ಟು ಒಂದೊಂದೇ ಕೇಳ್ತಾ ಬಾ—ನೋಡು-ನಾಂದಿಗ್ರೇಗ್ಯದ ಕೆಲ್ಸವೆಲ್ಲಾ ಮುಗೀತು. ಧಾರೆಗಿನ್ನೂ ಸಾವಕಾಶ-ದೊಡ್ಡೋರ ಮನೆ ಮದ್ವೇಂದ್ರೆ ಇಟ್ಟ ಲಗ್ನಕ್ಕೆ ವಿವಾಹವಾಗತ್ಯೇ? ಇನ್ನೂ ಹೊತ್ತಿದ್ಯೆಲ್ಲಾ ಮನೆಗ್ಹೋಗ್ಬಿಟ್ಟು ಬರೋಣಾಂತ ಬಂದೆ. ಗಂಟೆಂದು ಗೊತ್ತೇಯಿದೆಯಲ್ಲಾ-ದಾನದ ಸಾಮಾನು. ದಾರೀಲಿ ಯಂಗ್ಟೈಯ ಶೆಟ್ಟಿ ಸಿಕ್ಕಿದ ಬಲವಂತಮಾಡಿ ಕರ್ಕೊಂಡೋಗಿ 'ಹೊಸದಾಗಿ ಬಂದಿದೆ ದ್ಯಾವ್ರೂ, ತಕ್ಕೊಳ್ಳಿ 'ಂತ, ಸ್ವಲ್ಪ ಚಿಂತಾಮಣಿ ಮೆಣ ಸಿನಕಾಯಿ ಕೊಟ್ಟ-ಬಂದದ್ದು ಯಾಕೆ ಬಿಡಲಿ ?

**ಭಾಗೀರಥಿ**— ಅವನ ಹತ್ರ ಯಾಕಿಸ್ಕೊಳ್ಳೋಕ್ಕೆ ಹೋದ್ರಿ ? ಮೊನ್ನೆ ತಾನೇ ಅಡ್ಕಿಕೆ ಮಾತ್ಗೆ ಹಣಾಹಣೀ ವ್ಯಾಜ್ಯಾ ಕಾದ್ರಿ !



**ಅವಧಾನಿ—** .......ದಾರೀಲಿ ಯಂಗಯ್ಯಶೆಟ್ಟಿ ಸಿಕ್ಕಿದ. ಬಲವಂತ ಮಾಡಿ ಕರ್ಕೊಂಡ್ಹೋಗಿ ' ಹೊಸದಾಗಿ ಬಂದಿದೆ ದ್ಯಾವ್ರು ತಕ್ಕೊಳ್ಳೀ'ಂತ, ಸ್ವಲ್ಪ ಚಿಂತಾಮಣಿ ಮೆಣಸಿನಕಾಯಿ ಕೊಟ್ಟ............

( ಪುಟ ೨೫ )

**ಅವಧಾನಿ**— ಸರಿ ಬಿಡು. ವ್ಯಾಜ್ಯದ ಮಾತು ವ್ಯಾಜ್ಯಕ್ಕೆ! ಅವೆಲ್ಲಾ ನೋಡ್ತಾ ಹೋದ್ರೆ ಸಂಸಾರ ಸಾಗೋದ್ಹ್ಯಾಗೆ? ಇದಿರಲಿ-ಆ ನರಸಿಂಹಯ್ಯನೋರ ವಿಚಾರ ಏನ್ಮಾಡಿದ್ಯೇ ?

**ಭಾಗೀರಥಿ**— ಯಾವದು, ಸುಬ್ಬು ಮದ್ವೇ ವಿಚಾರವೇ? ಜಾತಕ ಕೂಡೋದಿಲ್ಲ-ಒಂದು ಗಣಾನೂ ಸರಿಯಾಗಿಲ್ಲ-ಮನ್ತ್ನಾನೂ ಸಂಬಂಧಕ್ಕೆ ಅಷ್ಟೇನೂ ಯೋಗ್ಯವಾಗಿಲ್ಲ. ಮುಖ್ಯ ನಮಗ್ಬೇಡ ಆ ಹಾಳು ಸಂಬಂಧ

**ಅವಧಾನಿ**— ಯಾರೇ ನಿನಗಿದ್ನೆಲ್ಲಾ ಹೇಳಿದ್ದು. ಅವಧಾನಿ ಯಾಗ್ಹುಟ್ಟಿ ಜಾತ್ಕ ನೋಡೋದ್ಕಲ್ತ್ಕೊಂಡದ್ದಕ್ಕೆ ನನ್ನ ಜನ್ಮ ಸಾರ್ಥಕವಾಯ್ತು. ನಾನೇ ಕೂತ್ಕೊಂಡು ಗುಣಿಸ್ಕೋಡಿದ್ದೀನಿ-ಇತಿ ಗಣಗಳು ಕೂಡುತ್ತೆ-ಗ್ರಹಮೈತ್ರಿ ದಿವ್ಯವಾಗಿದೆ ಒಳ್ಳೇಮನ್ತನ. ತೊಟ್ಟೇಮನೆ ಶೇಕ್‌ದಾರ್ ವೆಂಕಟರಾಮಯ್ಯನೋರೂಂದ್ರೇನು ಸಾಮಾನ್ಯರೇ-ಅವರ ಮೊಮ್ಮಕ್ಕಳು ನರಸಿಂಹಯ್ಯನೋರು-ಸಾಲ ದ್ದಕ್ಕೆ ನನಗೆ ಹಳೆ ಸಂಬಂಧ ಬೇರೆ-

**ಭಾಗೀರಥಿ**— ನಮಗ್ಬೇಡ ಆಸಂಬಂಧಾಂತ ಹೇಳಿದ್ಮೇಲಾಗ್ಹೋಯ್ತು. ಅಷ್ಟಾಸೆಯಿದ್ರೆ ಆ ಹೂಕಣ್ಣಿನ ಹುಡಿಗೀನೇ ತಂದ್ಕೋಳಿ ನನ್ನಭ್ಯಂತರವೇನೂಯಿಲ್ಲ. ಈ ಮನೆಗೆ ನಾನಾರು ? ಯಾವದೋ ಎಕ್ಕಿಲ್ದ ಪರದೇಶಿ ! ನೀವುಂಟು ನಿಮ್ಮ ಸುಬ್ಬು ಉಂಟು. ಈ ಮದ್ವೇಗೆ ನಾನು ಹಸೆ ಮೇಲೆ ಕೂಡಾ ಕಾಲಿಡೋದಿಲ್ಲ. ಜ್ಞಾಪಕ ದಲ್ಲಿಟ್ಕೊಂಡ್ರಿ....

**ಅವಧಾನಿ**— ಚೆನ್ನಾಯ್ತಪ್ಪ ಚೆನ್ನಾಯ್ತು ಹಟಹಿಡಿದಮೇಲೆನ್ನಿ ವಳು ಚಂಡಿ ತಂಗೀನೇ (ಪ್ರಕಾಶ) ಇನ್ನ್ಯಾವುದು ತರ್ಬೇಕು? ಆ ನಿಮ್ಮಣ್ಣನ್ನಗಳ್ನೋ-ಅವನೋ ಶುದ್ಧ ಜೂಜುಕೋರ-ಹೆಣ್ಣೋ ಶ್ರೀವೈಷ್ಣವರ ದೇವಸ್ಥಾನದ ಕಲ್ಕಂಬ ಇದ್ದಹಾಗಿದೆ. ಪ್ರ...

ಬುದ್ಧೀಲೋ ಸರಸ್ವತಿ ವೀಣೆ ಬಾರುಡೆ ಮಾರುತು. ಇಂಥಾ ರತೀನೋ ನಮ್ಮ ಸುಬ್ಬೂಗೆ, ಚೆನ್ನಾಗಿದೆ, ಚೆನ್ನಾಗಿದೆ!

**ಭಾಗೀರಥಿ** — (ಸ್ವಲ್ಪ ಸ್ವಲ್ಪ ಅಳುತ್ತಾ) ಹೌದು ಹೌದು. ನಮ್ಮಣ್ಣ ಶುದ್ಧ ಜೂಜುಕೋರ. ನಿಮ್ಕಡ್ಯೋರೆಲ್ಲಾ ಮಹಾ ಸಭ್ಯರು. ನಾನ್ಬೇಕಾಗಿದ್ದಾಗ ಮಾತ್ರ ನಮ್ಮ ಅಣ್ಣನಂಥಾ ಒಳ್ಳೇವ್ರೇ ಇರ್ಲಿಲ್ಲ. ನೀವೂ ನಿಮ್ಮ ಜೋಯಿಸ್ರೂ ದಿನಕ್ಕಿಪ್ಪತ್ಸಲ ಅವನ್ಮನೆ ಬಾಗಿಲ್ಗಲದ್ರಿ. ಈಗವನು ಜೂಜುಕೋರನಾಗಿ ಹೋಗ್ಬಿಟ್ಟ! ಆ ನರಸಿಂಹಯ್ಯ ವರದಕ್ಷಿಣೆ ಕೊಡ್ತೀನಂದಾಗಿಂದ ನಿಮ್ಮ ಬಾಯಿಲ್ಲಿ ನೀರೂರಿದೆ ನಿಮ್ಮಿಷ್ಟ, ಬೇಕಾದ್ಮಾಡ್ಕೊಳ್ಳಿ—ನಾನು ನಾಳೇನೇ ನಮ್ಮಣ್ಣನ್ಮನೇಗೆ ಹೋಗಿಬಿಡ್ತೀನೆ. ನಿಮ್ಮ ಸುಬ್ಬು ವಿದ್ಯೆ—ಅವನ ಬುದ್ಧಿ—ಕೊಳ್ಳೋಗೋ ನಿಮ್ಮ ಅಷ್ಟೈಶ್ವರ್ಯ ಪದವಿ ಇವಕ್ಕೆ ಸೀತಾಲಕ್ಷ್ಮಿ ಸಾಲ್ದೇನೋ! ನಮ್ಮನೆ ಹೆಣ್ಮಕ್ಳು ನಮಗೇನಸಡ್ಡೆಯಾಗಿಲ್ಲ. ಅಣ್ಣಂಗಿರೋದೆಲ್ಲಾ ಒಂದೇ ಹೆಣ್ಮಗ್ಳು. ಅದ್ದರಿಯಿಂದ ಮದ್ವೇಮಾಡ್ಬೇಕೂಂತಾಲೂ ಇದ್ದಾನೆ! ನಿಮಗೇ ಅದೃಷ್ಟವಿಲ್ಲ ಬಿಡಿ.

**ಅವಧಾನಿ**— ಅಲ್ವೇ ವರದಕ್ಷಿಣೆ ಕೊಡ್ತೀನೆಂದಾಗಿಂದ ನಿಮ್ಮ ಬಾಯಲ್ಲಿ ನೀರೂರಿದೆ ಎಂತ ಹೇಳ್ಬಿಟ್ಟೆಯಲ್ಲಾ. ವರದಕ್ಷಿಣೆಗೋಸ್ಕರವಾದ್ರೂ ಆ ಸಂಬಂಧ ಒಪ್ಕೊಳ್ಳಿದ್ರೆ ನಿಂಗೆ ವಜ್ರದ್ವಾಲೆ ತರೋದ್ಹ್ಯಾಗೇ?

**ಭಾಗೀರಥಿ**— ಆಹಾಹಾ! ಎಷ್ಟು ಯೋಚನೆ ಮಾಡೀ ಮಾಡಿ ಬಾಯ್ಬಿಟ್ರೀ ನನ್ನುದ್ಧಾರ ಮಾಡೋಕೆ. ವರದಕ್ಷಿಣೇನೇ ನಿರೀಕ್ಷಿಸ್ಕೊಂಡಿದ್ದೀರಲ್ವೇ. ಮೊನ್ನೆ ಶೇಷಗಿರಿರಾಯ್ರಿಂದ ವಸೂಲ್ಮಾಡಿದ ೪೦೦ ಏನಾಯ್ತು. ಪಾತಕ್ಕನ ನಗಾನೆಲ್ಲ ಮಾರಿ ಬ್ಯಾಂಕಿಗೆ ಹಾಕಿದ್ರಲ್ಲಾ ಸಾವಿರ ಚಿಲ್ರೆ ಅದೇನಾಗಬೇಕು? ವಾಲೆ ನಂಗೋಸ್ಕರವೇನೂ ತೆಕ್ಕೊಡಬೇಕಾಗಿಲ್ಲ. ನಾನ್ನಾಳೆ ವಜ್ರದ್ವಾಲೆ ಹಾಕ್ಕೊಂಡ್ರೆ 'ನನ್ಹೆಂಡ್ತಿ ಕಿವೀ ನೋಡಿದ್ರಾ' ಎಂತ ಜಂಭ ಹೊಡ್ಕೊಳೋರು ನೀವೇನೆ!

ಇದರ ತಪ್ಪನ್ನೆಲ್ಲಾ ಇವರಿಗೆ ಸರಿಯಾಗಿ ತಿಳಿಸೋ ವೀರ ಯಾವ್ನೋನು ಹುಟ್ಟಬೇಕೋ ಕಾಣೆ. ನಾವೇನಾದ್ರೂ ಹೇಳೋಕೆ ಹೋದ್ರೊ ಬೈಗಳ ಸುರಿಮಳೆ! 'ಈಗಿನ ಕಾಲದೋರು ಧರ್ಮ ಹೀನರು, ಮಾನರಹಿತರು, ಭಂಡರು, ಗುರು ನಿಂದಕರು' ಎಂತ ನಮ್ಮನ್ನೆಲ್ಲಗಳೆದು ಹಿಗ್ಗೋಕ್ಕಾತ್ರಾ ಸರಿ! ಈ Conservative Natureಯೆಲ್ಲಾ ಹೋಗಿ Liberal Spirit ಬೆಳೀಬೇಕಾದ್ರೆ ಯಾವ ಮಾರ್ಟಿನ್ ಲ್ಯೂಥರು ಹುಟ್ಟಬೇಕೋ ಕಾಣೆ (ಎಂದು ಪತ್ರಿಕೆಯನ್ನೋದಲು ಪ್ರಯತ್ನಿಸಿ-ಪಕ್ಕಕ್ಕೆ ಅಕಸ್ಮಾತ್ ತಿರುಗಿ) ಯಾರೋ ಈಕಡೆ ಬರ್‍ತಾ ಇದ್ದಾರೆ—ನಂಜಮ್ನೋರು-ಯಾಕ್ಹೀಗೆ ಬೆದರಿದ ಚೆಕ್ಕಿನ ಹಾಗಿದ್ದಾರೆ?—ಅಯ್ಯೋ ಪ್ರಾಣೀ (ನಂಜಮ್ಮ ಪ್ರವೇಶಿಸುವಳು) ಏನ್ನಂಜಮ್ನೋರೇ ಬಂದದ್ದು? ಏನು ವಿಶೇಷ ಹೇಳಿ.

**ನಂಜಮ್ಮ**— ಅಪ್ಪಾ! ನೀವ್ಬಂದು ವಿಶ್ವಾಸದಿಂದ ನನ್ನ ಯೋಗ ಕ್ಷೇಮ-ನನ್ನಂಥಾ ಹೀನ ಜಂತುವಿನ ಯೋಗಕ್ಷೇಮ ವಿಚಾರಿಸ್ದಾಗ ಮನಸ್ನಲ್ಲಿ ಏನೋ ಸಂತೋಷವಾಯಿತು. ಈ ಮನೇಲಿ ಒಳ್ಳೇ ಮಾತೂನ್ನೋದು ಕೂಡ ಕೇಳಿ ಎಷ್ಟೋ ದಿವಸಗಳಾಗಿತ್ತು. ನಿಮ್ಮ ವಿಶ್ವಾಸ ನೋಡಿ ಮನಸ್ನಲ್ಲಿ ಹೊಸದೊಂದು ಆಸೆಹುಟ್ಟಿತು. ಈ ಬಡಪಾಪಿ ದುಃಖ ನೀವಾದ್ರೂ ಹರಿಸ ಬಲ್ರೇನೋ ಎನ್ನೋ ನಂಬಿಕೆಯಾಯ್ತು-ಮುಖ್ಯ ಪ್ರಪಂಚದಲ್ಲಿ ಗಂಡಾ ಅನ್ನೋ ವಸ್ತು ಕಳ್ಕೊಂಡಮೇಲೆ ಹೆಂಗಸ್ರಾದ ನಾವು ಜೀವಿಸಿರ್‍ಬಾರದು ಹೊಟ್ಟೇಲ್ಹುಟ್ಟಿದ ಕಂದ ಆ ಶಾಮೂ ಅವನಾರೂ ಇದ್ದಿದ್ರೆ........ (ಕಂಬನಿಗರೆಯುವಳು)

**ಗಂಗಾಧರ**— (ಮರುಕದಿಂದ) ಅಮ್ಮಾ ಅಳ್ಬೇಡಿ. ದುಃಖ ವ್ಯಸನ ಯಾರನ್ನೂ ಬಿಡೋದಿಲ್ಲ. ಊರೂರ್‍ನ ಆಳೋ ಅರಸರ್‍ನ ಕೂಡಾ ಬಿಡೋದಿಲ್ಲ. ಆಪ್ತೇಷ್ಟರನ್ನ ಕಳ್ಕೊಳ್ಳೋ ಸೌಭಾಗ್ಯ (?) ಎಲ್ಲಾರೂ ಕೇಳ್ಕೊಂಡ್ಬಂದಿದ್ದಾರೆ. ದುಡ್ಡಿದ್ದಾಕ್ಷಣ ಜನಗಳ ಬಾಳು ಸುಖವಾಗಿರತ್ತೇಂತ ತಿಳ್ಕೊಂಡಿದ್ದೀರೇನು?

**ನಂಜಮ್ಮ**—ಹಾಗಂದ್ರೇನಪ್ಪಾ-ಲೋಕದಲ್ಲಿ ಎಲ್ಲಕ್ಕೂ ದುಡ್ಡೇ ಪ್ರಾಧಾನ್ಯವಲ್ವೇ! ದುಡ್ಡಿಗೆ ಗೌರವ—ದುಡ್ಡಿಗೇ ಮರ್ಯಾದೆ. ಗುಣಕ್ಕೂ ಮನುಷ್ಯರಿಗೂ ಯಾರಪ್ಪಾ ಕೊಡ್ತಾರೆ ಮನ್ನಣೆ ಈ ಕಾಲ್ದಲ್ಲಿ?

**ಗಂಗಾಧರ**— ನಿಜ ನಿಜ! ನೀವು ಹೇಳೋದು ನಿಜ. ಪ್ರಪಂಚದ ನಡವಳಿಕೆಯೇ ಹೀಗಾಗಿದೆ—ಪ್ರಪಂಚವೇಕೆ—ಪ್ರಪಂಚ ಸೃಷ್ಟಿಮಾಡಿದ ಪರಮಾತ್ಮನೂ ಹೀಗೆಯೇ! ಗುಣಕ್ಕೆ ಮನ್ನಣೆಯಿದ್ರೆ ನನ್ನ ರತ್ನದಂಥಾ ತಾಯಿ ಏಕ್ಸಾಯಬೇಕಾಗಿತ್ತು?-ರೈತರಿಂದ ಪೂಜಿಸಲ್ಪಡ್ತಿದ್ದ ತಂದೆಯಾಕ್ಸಾಯಬೇಕಾಗಿತ್ತು? (ಕಂಬನಿ ತುಂಬುವದು)

**ನಂಜಮ್ಮ**— (ಆತ್ಮಗತ) ಶಾಮೂನ, ಅವರ್ನ ಕಳೆದುಕೊಂಡ ನಾನೊಬ್ಬೇ ದುಃಖಪಡೋಳೂಂತಿದ್ದೆ. ತಂದೆತಾಯಿಗಳ್ನ ಕಳೆದ್ಕೊಂಡ ಈತನ್ದುಃಖ ಹೇಳಲು ತೀರದಾಗಿದೆ! ಅಯ್ಯೋ ದೇವರೇ—ದೇವರಂತೆ ದೇವರು—ದೇವರಿದ್ದಿದ್ರೆ ಹೀಗೆಲ್ಲಾ ಯಾಕಾಬ್ಬೇಕಾಗಿತ್ತು? (ಪ್ರಕಾಶ) ನಿಮ್ಮ ವ್ಯಸನ ನೋಡಿದ್ರೆ ತುಂಬಾ ಸಂಕಟವಾಗುತ್ತೆ. ನಾನೂ ಅವರೂ ಇಬ್ಬರೂ ತೀರ್ಕೊಂಡಮೇಲೆ ಶಾಮೂ ಇದ್ದಿದ್ರೆ ನಿಮ್ಮ ಹಾಗೇ ಹಗಲೂ ರಾತ್ರೀ ದುಃಖಿಸ್ತಿದ್ನೇನೋ? ಕಷ್ಟಾಕಾಣದ ಕಂದ-ಸಾಯುವಾಗ ಕೂಡ 'ಅಮ್ಮಾ. ನನ್ಬಿಟ್ಟು ಹೋಗಬೇಡ್ವೇ' ಎಂದ-ಈಗವನೇ ನನ್ಬಿಟ್ಟು ಹೊರಟುಹೋದ—

**ಗಂಗಾಧರ**— (ಆತ್ಮಗತ) ಆಹಾ! ಮಕ್ಕಳ್ನ ಕಳ್ಕೊಂಡ ತಾಯಂದಿರ ದುಃಖ ಇಷ್ಟು ಘೋರವಾದದ್ದೇ. ಈಕೆ ಬಂದ ಕೆಲ್ಸಾ ವಿಚಾರಿಸಿ ಮನಸ್ಸಿಗೆ ಸ್ವಲ್ಪವಾದ್ರೂ ಸಮಾಧಾನ ಉಂಟುಮಾಡಿ ಕಳುಹಿಸ್ದೆ ಹೆಂಗಸ್ಗಾಗೆ ನಾನೇ ಅಳ್ತಾಕೂತೆ-Disgraceful! (ಪ್ರಕಾಶ) ಅಮ್ಮಾ, ನಮ್ಮ ನಮ್ಮ ಪೂರ್ವಾರ್ಜಿತ ಕರ್ಮಗಳೇ ಇಂಥಾ ದುಃಖಗಳ್ನ ತಂದೊಡ್ಡತ್ವೆ. ಅವುಗಳ್ನೆಲ್ಲಾ ನಾವು ಧೈರ್ಯವಾಗೆದುರಿಸ್ಬೇಕಲ್ದೆ ಸುಮ್ನೆ ಅಳೋದೇ! ಇಂಗ್ಲೀಷ್ನಲ್ಲಿ 'Dear ones to

**ಅವಧಾನಿ**— (ನಕ್ಕು) ಎಲೇ, ನಿಂಗಾ ಮುಂಗೋಪ ಒಂದಿರ್ದಿದ್ರೆ ನಿನ್ನ ಸಮಾನ ಹೆಂಗಸ್ರೆ ಇಲ್ವೇ ಈ ಪ್ರಪಂಚದಲ್ಲಿ. ಹೋಗಲಿ ಒಬ್ಳೇ ಮಾತಾಡಿಯಾಡಿ ಬಾಯಾಕೊಣಗ್ಸ್ಕೋತಿಯೇ ಒಳ ಗ್ಹೋಗಿ ಒಂದಿಷ್ಟು ಹಾಲಾದ್ರೂ ಕುಡಿದು ಬಾ ನಮ್ಮತಮ್ಮ ಸಂಬಂಧ ಬಿಟ್ಟು ಕಂಡೂಕಾಣದ ಕಡೆ ತರೋಕೆ ಎಲ್ಲಾದ್ರೂ ನಾನು ಹೋಗ್ತೇನ್ಯೆ. ನೀನೇನಂತಿಯೋ ತಿಳ್ಕೋಳೋಣಾಂತ ನರಸಿಂಹಯ್ಯ ನೋರ ಪ್ರಸ್ತಾಪವೆತ್ತಿದೆ ಅಷ್ಟೇ! ಸದ್ಯಕ್ಕೆ ಏನಾದರೂ ಒಂದಿಷ್ಟು ತಿಂಡೀ ಮಾಡ್ಕೊಡ್ತಿಯೋ ಇಲ್ವೊ. ಮದ್ವೇ ಮನೇಲೂ ಏನಿಲ್ಲ. ಇಲ್ಲೂ ಲೊಟಪಟ ಮಾಡಿಬಿಡ್ತಿಯೋ?

**ಭಾಗೀರಥಿ**— (ಹಸನ್ಮುಖಳಾಗಿ) ಎಲ್ಲಾ ತಿಳ್ದೋರು ನಿಮಗೆ ನಾನು ಹೇಳ್ಬೇಕೇ? ಒಂದರಕ್ಷಣದೊಳಗಾಗಿ ಉಪ್ಪಿಟ್ಟು ಮಾಡ್ಕೊಡ್ತೀವಿ. ಒಳ್ಳೇ ಮೊಸರಿದೆ-ಉಪ್ಪಿನ್ಕಾಯಿ ಚೆನ್ನಾಗಿ ಮಾಗಿದೆ—ಹೊಟ್ಟೆತುಂಬಾ ತಿಂದ್ಹೋಗಿ—ಬರೋದು ಹೊತ್ತಾಗ್ಬಹುದು. (ನಿಷ್ಕ್ರಮಿಸುತ್ತಾ) ಮದ್ವೇ ಹೊತ್ಗಾದ್ರೂ ವಾಲೆ......

**ಅವಧಾನಿ**— ಊ. ಒಂದೊಂದಾಗಿಯಾಗ್ಬಾರದೇ (ಭಾಗೀರಥಿ ನಿಷ್ಕ್ರಮಿಸುವಳು) ಹೆಂಡ್ತೀಂದ್ರೆ ಭಾಗೀರಥಿಯಂಥಾ ಹೆಂಡ್ತಿ ಇರ್ಬೇಕು. ಅವಳ ಸಂತೋಷಕ್ಕೆ ನಾನ್ಯಾಕೆ ಭಂಗ ತರ್ಬೇಕು.

(ಸುಬ್ಬು ಕದಾ ತಟ್ಟುವನು ಅವಧಾನಿ ಎದ್ದು ಹೋಗಿ ಬಾಗಿಲು ತೆಗೆದು ಸುಬ್ಬುವಿನೊಂದಿಗೆ ಪ್ರವೇಶಿಸುವನು ಸುಬ್ಬು ಉಟ್ಟಿರುವು ದೊಂದು ಕೊಳಕುಪಂಚೆ. ಒಂದು ಕೈಯಲ್ಲಿ ಸ್ಲೇಟು ಪುಸ್ತಕ- ಇನ್ನೊಂದು ಕೈಯಲ್ಲಿ ಅರ್ಧ ತಿಂದ ಸೀಬೇಕಾಯಿ, ತಲೆಯಮೇಲೆ ಹರಿದುಹೋದ ಹಾಸನದ ಕೆಂಪುಟೋಪಿ. ಧರಿಸಿರುವುದು ಕೊಳಕು ಅಂಗಿ)

**ಅವಧಾನಿ**— ಸ್ಕೂಲು ಮುಗೀತೇ ಸುಬ್ಬಣ್ಣ! ನೋಡಿದ್ಯಾ, ಹಾಳು ಸೀಬೆಕಾಯ ತಿನ್ನಬೇಡಪ್ಪಾಂದ್ರೆ ಅದೇ ತಿನ್ತೀಯ. ಅಂಗಿ

ಟೋಪಿಯೆಲ್ಲಾ ತೆಗೆದು ಲಕ್ಷಣವಾಗೊಂದು ಪಂಚೆ ಹೊದ್ಕೊಂಡ ನನ್ನ ಜೊತೆ ಬಾ. ಮದ್ವೇ ಮನೆಗ್ಹೋಗೋಣ.

**ಸುಬ್ಬು**— ಮದುವೆ ಮನೆಗೇನಪ್ಪಾ ! ಹೊ ಹೋ ! (ಕುಣಿಯುವನು)

**ಅವಧಾನಿ**— (ಸುಬ್ಬುವನ್ನು ಹಿಡಿದು ಗದರಿಸಿ) ಯಾವಾಗ್ನೋಡಿದ್ರೂ ಹುಡುಗ ಬುದ್ಧಿಯೇ. ಹೀಗೆಲ್ಲಾ ಮಾಡಿದ್ರೆ ನಾನ್ಕರೊಂಡ್ಹೋಗೋದಿಲ್ಲ ನೋಡು-ಹೋಗು ಬೇಗ. ಬಟ್ಟೆ ಬರೆ ಬದಲಾಯಿಸ್ಕೊಂಡು ಬಾ. (ಸುಬ್ಬು ನಿಷ್ಕ್ರಮಿಸುತ್ತಿರಲು) ಸುಬ್ಬಣ್ಣಾ, ಇಲ್ಬಾ. ಹಾಗೇ ಅಂಗಡಿಗ್ಹೋಡೋಗಿ ೩ ಕಾಸಿಗೆ ಉಂಡೇನಶ್ಯ ತೊಗೊಂಬಾ. ಬೇಗಬಾ ಹೊತ್ತಾಯ್ತು. (ಸುಬ್ಬು ನಿಷ್ಕ್ರಮಿಸುವನು) ನಾನೂ ಒಳಕ್ಹೋಗಿ ಹೊಟ್ಟೆಗೇನಾದ್ರೂ ಒಂದಿಷ್ಟಾಕ್ಕೊಂಡು ಮದ್ವೇಮನೆಗ್ಹೋಗ್ತೀನಿ. (ನಿಷ್ಕ್ರಮಿಸುವನು)

---

## ದೃಶ್ಯ ೪.

[ಶೇಷಗಿರಿರಾಯರ ಮನೆಯ ಒಳಭಾಗದ ಒಂದು ನೋಟ ಹೊರಗಡೆ ಒಬ್ಬ ಭಿಕ್ಷುಕನ ಆರ್ತನಾದ ಕೇಳಬರುವುದು.]

**ಗಂಗಾಧರ**— ಯಾರದು ಹೊರಗೆ Beggar. ಇವರ್ಗೇನು. ಹೊತ್ತೂ ಗೊತ್ತೂ ಒಂದೂಯಿಲ್ಲ! ಇದು ನಮ್ಮ indescriminate charity ಯ ಫಲ ಹೂ ಹೋಗಲಿ—ಪಾಪ, ಮುದುಕನೋ ಮೋಟ್ನೋ ಇರಬಹುದು. ಲೋ ಬೋರಾ! ಬೀದಿಲ್ಯಾರೋ ಭಿಕ್ಷಕ್ಕೆ ಬಂದಿದಾರೆ; ಒಂದು ಹಿಡಿ ಅಕ್ಕಿ ಹಾಕಿ ಕಳುಹಿಸೋ. (ಬೋರ 'ಅಪ್ಪಣೆ ಬುದ್ಧಿ' ಎನ್ನುವನು—ಪುನಃ ಭಿಕ್ಷುಕನ ಕೂಗು ಕೇಳಿಬರುವುದು. ಗಂಗಾಧರ ಬೇಸರಪಟ್ಟುಕೊಂಡು) ಥೂ! ಅಕ್ಕೀ ಹಾಕಿದ್ರೂ ಯಾಕ್ಹೀಗೆ ಅರಚಕೋತಾನೆ. ಹೊಟ್ಟೆಗಾಯ್ತು ಇನ್ನು ಬಟ್ಟೆಗೋ ಗುರಿ (ತೆರೆಯ ಕಡೆ ನೋಡಿ) ಹೋಗ್ಹೋಗು. ನಿಮಗಿದೆಲ್ಲಾ ತಮಾಷೆಯಾಗ್ಹೋಯ್ತು! ಏನೋ ಪಾಪಾಂತ ಅಕ್ಕಿ ಹಾಕ್ಸಿದ್ದೇ ತಪ್ಪಾಗಿಹೋಯ್ತು. ಹೋಗ್ಹೋಗು! (ಒಳಗಿನಿಂದ ಗಂಗಾಧರನ ಗೆಳೆಯ ನಾದ ಕಿಟ್ಟ ಬಿದ್ದು ಬಿದ್ದು ನಗುತ್ತಾ ಪ್ರವೇಶಿಸುವನು) ದೇವ್ರೇಗತಿ! ನೀನೇಯೋ ಆ Troublesome Beggar ಕಿಟ್ಟೀ? ಯಾವಾಗ್ನಿಂದ ಈ ಹೊಸ Profession?

**ಕಿಟ್ಟಿ**— ಗಂಗೂ, ನಾವಿಷ್ಟು close friends ಆಗಿದ್ರೂ ನನ್ನ ಧ್ವನಿ ಗುರ್ತಿಸ್ಲಾರ್ದೆ ಹೋದ್ಯಲ್ಲಾ! ಏನಾಶ್ಚರ್ಯ!

**ಗಂಗಾಧರ**— ನಿಜ್ವಾಗಿಯೂ ಸಾಧ್ಯವಾಗ್ಲಿಲ್ಲ ಕಣೋ ನಿನ್ನ imitation ಬಹಳ realistic ಆಗಿತ್ತು ನೋಡು. Pathcs ಮಾತ್ರ Permanent ಆಗಿ absent ಆಗಿತ್ತು ಅಷ್ಟೇ!

**ಕಿಟ್ಟಿ**— ಹೋಗಲೀ – ಊದ್ಕಡ್ಡಿ ಇದ್ಯೇ – ಇಲ್ಲೊಂದು ತಾ (ಗಂಗಾಧರ ಸಿಗರೇಟಿನ ಪೆಟ್ಟಿಗೆಯನ್ನೂ, ಬೆಂಕೀಪೊಟ್ಟಣವನ್ನೂ

ಕೊಡುವನು. ಪರೀಕ್ಷಿಸುತ್ತಾ) ಇದೇನೀ Degradation ಗಂಗೂ, Scissors ಗೆ ಹಾಕಿದ್ಯೋ ಕತ್ರೀನ Elephant ಮೇಲೇರೋಕೆ. Arise, awake ಮಗೂ and stop not till Scissors are reached.

**ಗಂಗಾಧರ**— ಇದಕ್ಕಾರಣ ಏನೂಂತಿ ಕಿಟ್ಟಿ. ಈಚೆಗೆ ನಮ್ದೊಡ್ಡಪ್ಪ Family Budget ನಲ್ಲಿ retrenchment ಶುರುಮಾಡಿದ್ದೇ- ಇದು ನನ್ನ ಪ್ರಾಣಕ್ಕೇ ಬಂತು.

**ಕಿಟ್ಟಿ**— ಅಯ್ಯೋ ಪಾಪ! How I pity him-poor Postman-ತಿಂದಾ ಎರಡಾಣೇಗೆ ಚಕ್ರಾಸ. ಇದಕ್ಕೊಂದು Condolence meeting ಮಾಡ್ಬೇಕು ಕಣೋ-ಯಾಕೇಂದ್ರೆ These are days of condolence meetings.

**ಗಂಗಾಧರ**— (ಚಕಿತನಾಗಿ) wonderful fool! ನನಗೆ ದುಡ್ಡು ಚಕ್ರಾ ಬಿದ್ರೆ Post-man ಗೆ condolence ಕೊಡ್ತೀಯಲ್ಲಾ- ಭೇಷಪ್ಪ! ಇದ್ಮೊಳ್ಳೆ ನ್ಯಾಯ ಕಿಟ್ಟೀ Chief Court ನಲ್ಲಿ ನಿಂಗೋಸ್ಕರ ಒಂದು Seat ಖಾಲಿಯಿದೆಯಂತೆ.

**ಕಿಟ್ಟಿ**— ಹೌದು ಗಂಗೂ ನಿಜ. ನಿಂಗೂ ಒಂದು Seat ಖಾಲಿಯಿದೆಯಂತೆ — Royal Guest House ನಲ್ಲಿ! – ಎಷ್ಟು unreasonable fellow ನೋ ನೀನು! ದೊಡ್ಡೊಡ್ಡ ಸಂಸಾರಗಳ್ನ ನಿಭಾಯಿಸ್ಬೇಕೂಂದ್ರೆ Poor Postmen ಎಷ್ಟು ಕಷ್ಟ ನೋಡು. ಅದರಲ್ಲೂ ನಿನ್ನಂಥಾ ಒಬ್ಬ ಖಾಯಂ ಗಿರಾಕಿ ತಪ್ಪಿದ್ರೆ ಎಂಥಾ Heavy loss ನೋಡು. ಎರಡಾಣೇಂದ್ರೆ ನಿನಗಲ್ಪ-ಅವನಿಗಾದ್ರೋ ಮಹದೈಶ್ವರ್ಯ! ನೀನು ಹೇಗಾದ್ರೂ ಚಾಣಿಕ್ಯ ಸಂಧಾನಮಾಡಿ ಉಬ್ಬ ದೊಡ್ಡಪ್ನ ಹತ್ರ ಹಾಗೂ ಹೀಗೂ ಕಸೀತಿ, ಉದಾಹರಣೆಗೆ ಕೆಲವು ತೊಗೋ—ಎಂಟು ತಿಂಗಳು School fees ಗೆ ಹತ್ತು ತಿಂಗಳ್ದು ವಸೂಲಿ-Sports and Library fees ವರ್ಷಕ್ಕೆ

ಮುೂರ್ನಾಕು ಸಲ-ಪರ್ಗವಾಗೋ ಮೇಷ್ಟ್ರುಗಳಿಗೆಲ್ಲಾ Entertainments-Hostel Extras-ಬಟ್ಟೆ ಬರೇ ಕಳೆದ್ಹೋಯ್ತೂಂತ ಅದು ಬೇರೆ Lumpsum Grant-etc. etc. ಅಂತ ಇಟ್ಕೋ! ಗಂಗೂ ಇನ್ನೂ ಹೇಳಲೇ ?

**ಗಂಗಾಧರ**— ಸಾಕು ಸುಮ್ಮನಿರೋ. ಅವೆಲ್ಲಾ Trade-secrets —ಹೊರಗೆಲ್ಲಾ Expose ಮಾಡ್ತಾರೇನೋ ಕಿಟ್ಟು. ನಿನಗೆ ಸ್ವಲ್ಪವಾದರೂ ಗೊತ್ತಿಲ್ಲ.

**ಕಿಟ್ಟು**— ಹೋಗಲೀ ! ಇನ್ನೊಂದು ವಿಚಾರ ನಿನಗೆ ಹೇಳೋಣಾಂತಲೇ ಬಂದೆ. ಮಾತಿನ ಕಂತೇಲಿ Business ಮರ್ತೇಹೋಯ್ತು. ಗಂಗೂ, For heavens sake ನೀನು ನಾಳೆ ಹೆಸರು ಬದಲಾಯಿಸ್ಕೋಳೋ-ಶುದ್ಧ ಶ್ರೀವೈಷ್ಣವರ ಸಂಪ್ರದಾಯ ಇದ್ದ ಹಾಗಿದೆ.

**ಗಂಗಾಧರ**— ಶ್ರೀವೈಷ್ಣವರ ಸಂಪ್ರದಾಯಕ್ಕೂ ನನ್ನ ಹೆಸರಿಗೂ ಏನೋ ಸಂಬಂಧ ಕಿಟ್ಟು! ನೀನು ಯಾಕೋ ಇವೂಂಸಾಬ್ರಿಗೂ, ಗೋಕುಲಾಷ್ಟಮಿಗೂ ಸಂಬಂಧ ಬೆಳ್ಸೋಕೆ ಹೊರಟ್ಹಾಗಿದೆ.

**ಕಿಟ್ಟು**— Argumentation ಕೇಳೋಕೆ ಮುಂಚೆ Decision. ಅದಕ್ಕೇ ನಿನ್ನ Hasty fellow ಅಂತ ನಾನನ್ನೋದು. ಕೇಳು, ಅದೇ Explain ಮಾಡೋಣಾಂತಿದ್ದೆ. ಹೊಟ್ಟೆಗಿಲ್ಲಿಟ್ಟಲ್ದೆ 'ಭವತಿ ಭಿಕ್ಷಾಂದೇಹಿ' ಸಪ್ತಾಕ್ಷರಿ ಜಪಿಸ್ಕೊಂಡು, ಮನೆ ಮನೆಗೂ ಭಿಕ್ಷದ ಜೋಳಿಗೆ ಹಾಕ್ಕೊಂಡು ಬಂದ್ರೂ ಅವರ ಹೆಸರುಗಳ್ನಾತ್ರಾ ಬಲೇ ಜಬರ್ದಸ್ತು. ಸಂಪತ್ಕುಮಾರನ್, ಲಕ್ಷ್ಮೀಕಾಂತಯ್ಯಂಗಾರ್, ಶ್ರೀವತ್ಸ—ದ್ವಾರಕಾದಾಸ—ಹೀಗೇ ಹೇಳ್ತಾ ಹೋದ್ರೆ ಒಂದು ಸೋಮವಾರ ಅಮಾವಾಸ್ಯೆ ಪೂಜೆಗೆ ಹಾಕೋ ಅಪ್ಪಾಗತ್ತೆ-ಅವರ ಹಾಗೆ ನೀನು ನೀರಿನ ಅಡ್ಡೆ ಹೊರೇಕೆ ಯೋಗ್ಯತೆ ಇಲ್ದೇ ಇದ್ರೂ, ಗಂಗ-ಆಧಾರ ಮಾತ್ರ ಆಗಿ ಹೋಗಿದ್ದಿ. ಹೋಗ್ಲಿ ಗಂಗಾ ಅನ್ನೋ

'ಕನ್ಯಾರತ್ನವನ್ನಾದರೂ, ಗುರುಹಿರಿಯರ ಇಚ್ಛೆಯಂತೆ, ಶ್ರೀಹರಿ ಪ್ರೇರಣೆಯಿಂದ, ಅಗ್ನಿಸಾಕ್ಷ್ಯವಾಗಿ ವಿವಾಹಮಾಡಿಕೊಂಡ್ರೆ' ಆಗಾದರೂ ಗಂಗಾಧರನಾಗ್ತಿ.

**ಗಂಗಾಧರ**— ಶಃಬಾಸ್ ಕಿಟ್ಟೀ! Kitti the witty ಎಂತ ನಿಂಗೆ ಇವತ್ನಿಂದ Title. ನೀನು ಬಯ್ದರೂ ಸಂತೋಷವಾಗೋ ಹಾಗೆ ಬಯ್ತೀಯೋ-ಇತರರು ಹೊಗಳಿದ್ರೂ ಬಯ್ದಹಾಗೇ ಇರತ್ತಪ್ಪಾ-ಅದಿರ್ಲಿ ಕಿಟ್ಟಿ, ಇವತ್ತಿನ Beggar role ಯಾವಾಗ್ನಿಂದ ಅಭ್ಯಾಸ ಮಾಡ್ಕೊಂಡಿದ್ದೆ. ನನ್ನ ಹತ್ರಾನೆ ಸಮ್ಮತ ಹೊಡ್ಡಿಬಿಟ್ಯೆಲ್ಲಾ! ಕಿಟ್ಟೀ, ನನ್ನ ಹತ್ರ ಮರೆಮಾಚಬೇಡ. ಸಿಜ್ವಾಗ್ಲೂ ಹೇಳು-ನಿನ್ನ wit ನೀನು Enjoy ಮಾಡ್ತೀಯೇನೋ ?

**ಕಿಟ್ಟಿ**— ಈಗ್ಯಾಕೋ ಆ ಕಥೆ? ಶಿವಪೂಜೇಲಿ ಕರಡಿ ಬಿಟ್ಟ ಹಾಗೆ-ನನ್ನ Policy ಇಷ್ಟೇ ನೋಡು-ಪ್ರಪಂಚಕ್ಕೆ ತನ್ನದೇ ಹೊರೆಹೊರೆ Misery ಇದೆ. ಆದಕ್ಕೆ ನಾವೂ ಯಾಕೆ ನಮ್ಮ ಹೊರೇನೂ ಸೇರ್ಸಿ ಭಾರ ಹೆಚ್ಚು ಮಾಡ್ಬೇಕು? Direct ಆಗಿ ಒಂದು ಒಳ್ಳೇ ಕೆಲ್ಸಾ ಮಾಡೋಕಾಗ್ದೆಯಿದ್ರೂ ಸುತ್ತಮುತ್ತಲಿ ರೋರ ದುಃಖಾನ ನಾವು ಹೆಚ್ಚಿಸ್ದೇಯಿದ್ರೆ ಸಾಕಾಗಿದೆ. ಸಾಕು ಈ ಕಂತೆ ಪುರಾಣ-ನಡಿ walking ಆದ್ರು ಹೋಗೋಣ (ತೆರೆಯ ಕಡೆ ನೋಡಿ) ಆಗೋ ಅಲ್ಲಿ ನೋಡು. ನಿಮ್ಮ ದೊಡ್ಡಪ್ಪ ಪ್ರೇಮಶಿಷ್ಯ-ಹೊಟ್ಟೆಬಾಕ ಹಿಡಂಬಾಸುರ. ಏನು ವಿಚಾರ್ಸವನ ಗೋಳ್ನ (ಬೋರ ಪ್ರವೇಶಿಸಿ ಇಬ್ಬರಿಗೂ ನಮಸ್ಕರಿಸವನು) ಗಂಗೂ! ಈ 'ಪ್ರಣಾಮ' ನಿನ್ನ 'ಪ್ರಮಾಣ'ಕ್ಕೀಂತ ಕಾಣುತ್ತೆ. ಹುಷಾರಾಗಿರು ಮಗೂ-ಬಲೇಲ್ಬಿದ್ರು ಹಲ್ದಲ್ಲುಗಿರೀಬೇಡ.

**ಬೋರ**— ತಾವು ಪೇಟೆಯಿಂದ ಯಾವಾಗ್ಬತ್ತೀರೋಂತ ಬಕಪಕ್ಷಿ ಹಾಂಗ್ಕಾದ್ಕೊಂಡಿದ್ದೆ ಬುದ್ದಿ.

**ಕಿಟ್ಟಿ**— ಹಾಹಾ ! ಲಕ್ಷಣವಾಗಿ ಬಾಯ್ಬಿಟ್ಟು ನಾಲಕ್ಮಾತಾಡೋಕೆ ಬರದು-ಉಪಮಾನ ಉಪಮೇಯಗಳು ಬೇರೇ ಕೇಡು-ಪೇಟೆಯಿಂದ ಬಂದಿದ್ದಾರಲ್ಲಾ, ಬಕಪಕ್ಷೀ, ಬಾಯ್ಬಿಡು.

**ಬೋರ**— (ನಗುತ್ತಾ) ನಮ್ಮ ಕಿಟ್ಟಪ್ನೋರು ಯಾವಾಗ್ಲೂ ಇಂಗೇ-

**ಗಂಗಾಧರ**— ಬೋರಾ, ಏನೋ ಬಂದದ್ದು. ನನ್ನಿಂದೇ ನಾಗಬೇಕೊ ?

**ಬೋರ**— ಏನಿಲ್ಲ ಬುದ್ದಿ. ಒಂದು ಇಗ್ಗಾಪ್ನೆ ಐತೆ ತಾವ್ನಡಸ್ಕೊಡ್ಬೇಕು. ಏನೋ ಬುದ್ಯೋರು ಮನಸ್ಮಾಡಿ ಬಂಡ ಮುಂಡೇದ್ನ ಉದ್ಧಾರಮಾಡ್ಬೇಕೂಂತ .. ...........

**ಕಿಟ್ಟಿ** — ಕಣೀ ಇರಲಿ ಹೇಳೋದು ಹೇಳು, ನಡ್ಸ್ಕೊಡೋ ಮಾತು ಆಮೇಲೆ.

**ಬೋರ**— ನಮ್ಮದಣ್ಯೋರ ಪಾದಸೇವ್ಗೆ ಬಂದು ಮುಂದಿನ ಕಾಮಣ ಅಬ್ಬಕ್ಕೆ ಎಂಟು ವರ್ಸವಾಯ್ತು. ನಿಮ್ಮಪ್ಪಾವರ್ತಾವಿದ್ದೆ ಧರ್ಮರಾಯನಂಥಾ ಮರಾಯ್ರು-ತಂಪೊತ್ನಲ್ಲಿ ನೆನಸ್ಕೋಬೇಕು-ಮನೇ ಮಗಾಂತ ಕಾಣ್ತಿದ್ರು ಬುದ್ದಿ ನನ್ನ. ನಮ್ಮಣೀ ಬರಾ ಅವರು ಆರೋದ್ರು. ಕಲ್ಡಿ ಅಂತ ಮಾರಾಯ ಈವಯ್ನ ಕೈಗೆ ಸಿಕ್ಕೊಂಡೆ. ಜಮೀನ್ಸಾಗೋಳೀ ಮಾಡ್ತೀನೀಂತ ಎಲ್ಡುವರ್ಸದಿಂದೆ ಸಾವ್ರ ರೂಪಾಯ್ಕಡಾ ಇಸ್ಕೊಂಡೆ-ಬಡ್ಡಿ ಕೊಡ್ಬೇಕೂಂದ್ರು—ಊ ದಣೀಚಿತ್ತಾ ಅಂದೆ. ಓದು ಬರಾ ಬರ್ದಾ ಬಡಮುಂಡೇದು ಬುದ್ದಿ. ಕಾಗ್ದಾ ಪತ್ರಕ್ಕೆಲ್ಲಾ ಅವರೇಳ್ದಂಗೆ ಗುದ್ಲಿಗೀಟಾಕ್ದೆ. ನಿಮ್ಕಂಡಂಗೆ ಓದವರ್ಸ ಮಳೀ ಬೆಳೀ ಎಲ್ಲಾ ಓಯ್ತು. ಎಲ್ಡೊರ್ಸಕ್ಕೆ ಬಡ್ಡೀನೇ ಮೂಸ್ತಾಗಾಗ್ಯೈತಂತೆ !! ಏನ್ಗತಿ ಮಾಡಾನಾ ಬುದ್ದಿ. ದಣ್ಯೋರು ಲಾಯರಿ ಬಿಟ್ಟು ದಾವ ಆಕಸ್ತೀನಿ-ಕೋಲ್ಟಿಗೆಳ್ದು ಜಮ್ನಾ ಅರಸ್ತೀನಿ-ಅಂತಾರೆ. ನೀವೇ ಏಳಿ ಬುದ್ದಿ. ಅಣಾ ಎಲ್ರತ್ಲಿ!

ನಾನೂ, ಇಬ್ರೆಂಡ್ರೂ, ಮಕ್ಳೂ ಎಲ್ಲಾ ದಣೀಪಾದಾ ನಂಬಿ ರಟ್ಟೆ ಮುರ್ಯಾ ದುಡೀತೀವಿ. ಈ ವರ್ಷ ನಮ್ಮಪ್ಪೇನಾದ್ರೂ ಕಣ್ಬಿಟ್ಟು ಮಳೀ ಬೆಳೀ ಕೊಟ್ರೆ ತಿನ್ನೋಕೋಸಿ ರಾಗಿ ಇಟ್ಕೊಂಡು ಬತ್ತಾ ಮಾರಿ ಅಣಾ ತೀರಸ್ತೀನಿ. ಕಬ್ಬು ಆಕಾನಾಂತ ಮಾಡ್ಕೊಂಡಿವ್ನಿ. ಒಬ್ಬಂಟಿಗ ಬುದ್ದಿ ನಾನು-ಎಲ್ಲಾ ನಾನೇ ಮಾಡ್ಬೇಕು-ದಾಯಾದಿಗ್ಳ ಕಾಟ ಬ್ಯಾರೇ !

**ಕಿಟ್ಟಿ**— ಗಂಗೂ, ಇವನು ಹೇಳೋದೆಲ್ಲಾ ನಿಜ್ವೇ ?

**ಬೋರ**— ನಮ್ಮಪ್ರಾಣ್ಗೂ ನಿಜಾ ಬುದ್ದೀ ತಮ್ಮ ಪಾದ್ದಲ್ಲಿ ಅಪದ್ಧ ಏಳಾಕೆ ನಂಗೇಸು ಗುಂಡಿಗೆ ಬುದ್ದಿ. ಬೇಕಾದ್ರೆ ಪರಾಂಬರ್ಸಿ ಪತ್ರ್ರದ ನಕಲ್ನ (ಎಂದು ಕೊಡುವನು)

**ಕಿಟ್ಟಿ**— This is terrible-ಅಸಲು ಸಾವಿರ-ಎರಡು ವರ್ಷಕ್ಕೆ ಬಡ್ಡಿ ಶೇಕಡ ೨೪ ರಂತೆ ದೇವ್ರೇಗತಿ. ಗಂಗೂ ನಿಮ್ಮ ದೊಡ್ಡಪ್ಪ Shylock ಜೊತೇಲಿ competition ಗೆ ನಿಂತ್ಹಾಗೆ ಕಾಣುತ್ತೆ- Fiendish.

**ಗಂಗಾಧರ**— ನಿಜ ಕಿಟ್ಟಿ ನಿಜ ! This is really Bad. ನಮ್ಮ uncle reasoning ಕೇಳೋ ಮನುಷ್ಯನಲ್ಲ-Litigation ಅನ್ನೋದು ಅವನಿಗೆ ನೀರು ಕುಡಿದಹಾಗೆ. ಆದ್ರೂ ನಾನು ಹೇಗಾದ್ರೂ ಮಾಡಿ ಬೋರನ್ನ Save ಮಾಡ್ಲೇಬೇಕು.

**ಕಿಟ್ಟಿ**— Brave ಗಂಗೂ ಹಾಗೇ ಮಾಡು. ಬಡ ರೈತರ್ನ ಹೀಗೆ Litigation ಗೆ ತಂದು ಸಿಕ್ಸಿ ಅವರ್ಮನೆ ಹಾಳ್ಮಾಡೋ ಈ Aristocrats ಗೆ ಯಮಪಾಶ ಯಾವಾಗ ಸಿದ್ಧವಾಗತ್ತೋ ಕಾಣೆ.

**ಗಂಗಾಧರ**— (ಯೋಚಿಸುತ್ತಾ) ಒಂದೇ ಉಪಾಯ ಕಿಟ್ಟೀ. ನಾನೂ ಹ್ಯಾಗೂ Major ಪಟ್ಟಕ್ಕೇರಿದ್ದೀನಿ........ಇರಲೀ ಬೋರಾ, ನಿನಗೆ ಬಡ್ಡಿ ಎಲ್ಲಾ ಬಿಡ್ಸಿಬಿಡ್ತೀನಿ ಧೈರ್ಯವಾಗಿರೋ.

**ಚೋರ**— (ಕಂಬನಿ ಸುರಿಸುತ್ತಾ) ನನ್ನೊಡ್ಯಾ ಮಾನಾಪ್ರಾಣಯಲ್ಲಾ ಈರಭದ್ರ ದ್ಯಾವ್ರಾಂಗೆ ಬಂದ್ಕಾಪಾಡಿದ ಮಾರಾಯ ನಿನ್ನುಪ ಕಾರಕ್ಕೆ ನಾನೇನ್ಕೊಟ್ಟೇನು ದೇವರೇ. ಈ ಜಣ್ಮದಾಗಾಗ್ದೇ ಯಿದ್ರೂ ಮುಂದಿನ್ಜನ್ಮದಾಗಾದ್ರೂ ತೀರಸ್ತೇನಿ ನಮ್ಮಪ್ಪಾ (ನಮಸ್ಕರಿಸಿ ನಿಷ್ಕ್ರಮಿಸುವನು. ಸ್ವಲ್ಪಹೊತ್ತು ನಿಶ್ಶಬ್ದ ಕಿಟ್ಟುವೆದ್ದು ಗಂಗಾಧರನ ಹಸ್ತಗಳನ್ನು ಹಿಡಿದು)

**ಕಿಟ್ಟಿ**— ಗಂಗೂ, ಈ ಹಾಳು Modern Education ಪಡೀತಿದ್ರೂ Peasant redeemer ಆದ್ಯೆಲ್ಲಾ ಅದೇ ನನಗೊಂದು ಹೆಮ್ಮೆ. ಕಿರಿಯರು ಬರೇ ಮಾತಿನ ಮಲ್ಲರಲ್ಲ, ಕೆಲಸಗಾರರೂ ಕೂಡ ಎನ್ನೋದ್ನ ನೀನೇ ತೋರಿಸ್ದೆ. Godspeed ಗಂಗೂ, Worthy son of a worthy mother-ಈಗ ನಿನ್ನ ಹೆಸ್ರು ಸಾರ್ಥಕ್ವಾಯ್ತು. (ಗಡಿಯಾರ ನೋಡಿ) ಹೊತ್ತಾಯ್ತು. ಇನ್ನು ನಾನು ಬರ್ಲೇ? ಸಾಯಂಕಾಲ ನೀನೇ ಬಂದುಬಿಡು (ನಿಷ್ಕ್ರಮ. ಚೋರ ಪ್ರವೇಶಿಸಿ ಗಂಗಾಧರನಿಗೆ ಕೆಲವು ಅಂಚೆಯ ಕಾಗದಗಳನ್ನು ತಂದು ಕೊಡುವನು)

**ಗಂಗಾಧರ**— (ಕಾಗದಗಳನ್ನು ನೋಡುತ್ತಾ) Newspaper ! ನಮ್ಮ ಮನೆಗೆ Newspaper !! ದೊಡ್ಡಪ್ನ ಹೆಸರ್ಗೆ ! ಏನೋ ಸೋಜಿಗ ವಾಗಿದ್ಯೆಲ್ಲಾ. (ಒಡೆದು ನೋಡುತ್ತಾ) 'Bangalore Herald' —Latest—ಇದೇನು ಕಾಗದ ಚೇರಿ (ಓದುವನ)

SIR.

Under the same wrapper we have sent you a voucher copy of our Paper. While heartily thanking you for the kind patronage we beg to remind you of the balance of Rupees 13 as. 8 whose remittance we hope to receive at an early date.

*Thanking you once again for the kind patronage,*
*We have the Honour to remain Sir,*

Yours faithfully,
'THE MANAGER'

ಪತ್ರಿಕೆಯಲ್ಲಿ ಪ್ರಕಟಣೆ! uncle ದು! O, Lord ಯಾತಕ್ಕೆ ಪತ್ರಿಕೆಯನ್ನು ತಿರುವಿಹಾಕುತ್ತಾ ಒಂದು ಜಾಹೀರಾತನ್ನು ಹುಡುಕಿ)

WANTED:

An accompli hed Smartha Brahmin Bride for a well-to-do middle aged Zamindar.

Apply with Photograph to -
'S'
Care of 'BANGALORE-HERALD'
Bangalore City.

Lord Lord! ಇದು ನಿಜ್ವೇ? ನಮ್ಮ ದೊಡ್ಡಪ್ಪ ಎಷ್ಟು ಕೆಟ್ಟಿದ್ರೂ ಇಂಥಾ ದುರ್ನಡ್ತೇಗೆ ಕೈಹಾಕ್ತಾನ್ಯೆ? ನನಗ್ಯಾವುದೂ ಬಗೆ ಹರಿಯೋಹಾಗೆ ಇಲ್ವಲ್ಲಾ. ಯಾರಿಗೋಸ್ಕರ ದೊಡ್ಡಪ್ಪ ಈ Correspondence ನಡೆಸಬೇಕು?-ನನಗೋಸ್ಕರವೇ?-ಛೆ! ಇದಕ್ಕೆ Paper advertisement ಏನೂ ಬೇಕಿಲ್ವಲ್ಲಾ! ಅಯ್ಯೋ! ಕಿಟ್ಟಿ ಯಾದ್ರೂ ಇದ್ದಿದ್ರೆ ಚೆನ್ನಾಗಿತ್ತು—consult ಆದ್ರೂ ಮಾಡ್ಬೋದ್ದಾಗಿತ್ತು (ಯೋಚಿಸಿ) ಅವನೂ ಈಗ್ತಾನೆ ಹೋಗಿದ್ದಾನೆ. ದಾರೀಲೆ ಸಿಕ್ಕಿದ್ರೂ ಸಿಕ್ಕಬಹುದು. ಇರಲಿ ನೋಡ್ತೀನಿ. (ಸಡಗರದಿಂದ ಓಡುವನು)

—— ——

## ದೃಶ್ಯ ೫.

(ಬೀದಿಯ ನೋಟ ಕಾಣಬರುವುದು. ಕಿಟ್ಟಿ ಗೃಹಾಭಿಮುಖಿಯಾಗಿ ದ್ದಾನೆ. ಆಗ ಗಂಗಾಧರನ ಕೂಗು ಕೇಳಿಬರುವುದು)

**ಕಿಟ್ಟಿ**— (ಚಪ್ಪಾಳೆ ಧ್ವನಿಕೇಳಿ) ಯಾರದು ನನ್ನ ಕರೆಯೋದು? ಯಾರೋ ಹೀಗೇ ಓಡಿ ಬರ್‍ತಾಯಿರೋ ಹಾಗಿದೆ! (ದಿಟ್ಟಿಸಿ ನೋಡಿ). ಗಂಗೂ—ಇಷ್ಟು ಹೊತ್ತು ಆಯ್ತಲ್ಲ ಪ್ರಸಂಗ, ಈಗೇನ್ನಿರಬಹುದೋ. ರಾಜಕಾರ್ಯ. (ಗಂಗಾಧರ ಏಟ್ಟುಸಿರುಬಿಡುತ್ತಾ ಕೈಯಲ್ಲೊಂದು ವೃತ್ತಪತ್ರಿಕೆ ಹಿಡಿದುಕೊಂಡು ಪ್ರವೇಶಿಸುವನು) ಗಂಗೂ - ಇದೇ ನಿನ್ನವಸ್ಥೆ—ಯಾಕೆ ಹೀಗೆ ಒಂದೇ ಉಸಿರಿಗೆ ಓಡಿಬಂದೆ. ಸುದಾರಿಸ್ಕೊ ಸುದಾರಿಸ್ಕೋ! ಸುದಾರಿಸ್ಕೊಂಡು ನಿಧಾನವಾಗಿ ಹೇಳು.

**ಗಂಗಾಧರ**—(ಮಾತನಾಡದೆ ವೃತ್ತಪತ್ರಿಕೆ ಕೈಗೆ ಕೊಟ್ಟು ತಾನು ನೋಡಿದ ಜಾಹಿರಾತನ್ನು ತೋರಿಸುವನು)

**ಕಿಟ್ಟಿ**— (ನಗುತ್ತಾ) ಇದೇನ್ದೊಡ್ಡ ವಿಷ್ಯಾಂತ ಹೇಳೋಕೆ, ಹೀಗೆ, ಸಾಯೋದೂ ಬೀಳೋದೂ ಒಂದೂ ನೋಡ್ದೆ ಬಂದ್ಯೋ ಗಂಗೂ. ಪೇಪರ್‍ಗಳ್ಗೆ ಗ್ರಾಸ ಸಿಕ್ದೇಯಿದ್ದಮೇಲೆ Brides ಮತ್ತು Bride-groomಸೇ ಗತಿ!

**ಗಂಗಾಧರ**— ಕಿಟ್ಟೀ, ಮಾತಾಡೋಕೆ Excitement ಯಿಂದ ನನಗೆ ಬಾಯೇಯಿಲ್ಲ! ಈ ಕಾಗ್ದ ನೋಡು ಆ ಮೇಲೆ ನಿನಗೇ Advertis-ment ಅರ್ಥವಾಗತ್ತೆ.

**ಕಿಟ್ಟಿ**— (ಕಾಗದವನ್ನೋದುತ್ತಾ ಕನಲಿ) Fiendish ಗಂಗೂ ಇದೆಲ್ಲಾ ನಿನ್ನ Satanic ದೊಡ್ಡಪ್ಪನ ಪ್ರಭಾವ.

**ಗಂಗಾಧರ**— ಕಿಟ್ಟೀ ಕಿಟ್ಟೀ! ಯೋಚನೆಮಾಡು. ಯಾರನ್ನೂ

ನಾವು ವೃಥಾ ನಿಂದಿಸಬಾರದು. ಇದು ನಮ್ಮ ದೊಡ್ಡಪ್ಪಂದೂಂತಾಲೇ ಹ್ಯಾಗೆ ಗೊತ್ತು ! ದಾಯಾದಿಗಳ ಮೋಸವಾಗಿರ್ಬಹುದು.

**ಕಿಟ್ಟಿ** — ನಿಮ್ಮ ದೊಡ್ಡಪ್ಪಂದೂಂತಾಲೇ ನನಗೆ ನಿಶ್ಚಯ ಗಂಗೂ. ನಿಮ್ದೊಡ್ಡಪ್ಪ ಮದ್ವೇಗೆ ಪ್ರಯತ್ನ ಮಾಡ್ತಿದ್ದಾನೇಂತ ನಾನು ಹಿಂದೇನೇ ಕೇಳಿದ್ದೆ-ಆದ್ರೆ ನಂಬಿರ್ಲಿಲ್ಲ ! ನಿನ್ನ ಮದ್ವೇಗೆ ಪ್ರಯತ್ನ ಮಾಡ್ತಿದ್ದಾನೇಂತಾ ಸಂದೇಹಪಟ್ಟೆ ಆದರೀಗ Truth ಗೊತ್ತಾಯ್ತು. ನೀನೇ ಹೇಳು ಇದು ನಮ್ಮೂರ್ನಲ್ಲಿ ಇನ್ಯಾರಿಗೆ ಅನ್ವಯಿಸೋಕೆ ಸಾಧ್ಯ ?

**ಗಂಗಾಧರ**— ಯಾರೂ ಇಲ್ಲ ಸರಿಯೇ. ಆದರೆ ನಮ್ಮ uncle ಅಂತಾಲೇ ಏನು ಗೊತ್ತು ! ಇಷ್ಟಕ್ಕೂ ಅವನ ವಯಸ್ಸು Middle age ಅಲ್ಲವಲ್ಲಾ.

**ಕಿಟ್ಟಿ**— ನೀನು ಶುದ್ಧ Simpleton ಗಂಗೂ, ಅಷ್ಟು ಯೋಚಿಸ್ಲಿಲ್ಲವಲ್ಲಾ-ಸುಳ್ಳು ವಯಸ್ಸು ಕೊಟ್ಟಿರೋದೂಂತ-ಇದೆಲ್ಲಾ ನಿಮ್ಮ uncle, private secretary ಇದಾನಲ್ಲಾ 'ರಾಮಾವಧಾನಿ' ಅವನ ಕುತಂತ್ರಾಂತ ಕಾಣತ್ತೆ. ಮುದುಕರಿಗೆ ಮದ್ವೇ ಚಪ್ಲಾ ಹಿಡಿಸ್ಬೇಕೂಂದ್ರೆ ಆ Orthodax Rogue ಬಿಟ್ರೆಲ್ಲಾ. Leaders of Societyಲೀ ಇಂಥಾ Weakness ಬೆಳೆಯೋ ಹೊತ್ತಿಗೇ ನಮ್ಮ Society ಹೀಗೆ ಹಾಳಾದ್ದು.

**ಗಂಗಾಧರ**—ಈಗ ಸಂಶಯ ನಿವೃತ್ತಿಯಾಯ್ತು. ಕಿಟ್ಟೂ, ಏನಾದರೂ ಮಾಡಿ ಈ ಹಾಳ್ಮದ್ವೆ ನಾವು ನಿಲ್ಲಿಸ್ಲೇ ಬೇಕಾಗಿದೆ ನೋಡು. ನಮ್ಮ ಸಮಾಜಾನಾ Reform ಮಾಡ್ಬೇಕೂಂತ ನಾವು ಹೇಳ್ತಿದ್ನ ಸುಮ್ನೆ ಬೊಗಳೇಲಿ ಮುಕ್ತಾಯ ಮಾಡ್ಬಿಟ್ರೆ ಏನು ಸಾರ್ಥಕ ? ಇದಕ್ನಾವು ಕೈ ಹಾಕಿ ನಿಲ್ಲಿಸಿಬಿಟ್ರೆ, ಬರೋ ಆಸ್ತೀಲಿ ಪಾಲು ಕಮ್ಮಿಯಾಗತ್ತಲ್ಲಾಂತ ಸ್ವಂತ ಮಗನೇ ಅಪ್ಪನ್ಸುಖಕ್ಕೆ ವಿಘ್ನ ಬಂದಾಂತ

ಸಮಾಜ ದೂರತ್ತೆ. ದೂರಿದರೆ ದೂರಲಿ ಕಿಟ್ಟೂ, ನಮ್ಮ ಕೆಲಸ ನಾವು ಮಾಡ್ಲಿಕ್ಕೇಬೇಕು

**ಕಿಟ್ಟಿ**— ನಿಜ ಗಂಗೂ, ನಿಜ. ಹಾಗೆ ನಿನ್ನ ಅಂದೇ ಅಂತಾರೆ. ಅನ್ನೋರ ಮಾತಿಗೆಲ್ಲಾ ಬೆಲೆ ಕೊಡ್ತಾ ಕೂತ್ಕೊಂಡ್ರೆ ಕುದ್ರೆ ಮಾರೋಕೆ ಸಂತೆಗ್ಹೋದ ಅಪ್ಪ ಮಕ್ಳ ಕಥೆ ಆದ್ಹಾಗಾಗತ್ತೆ

**ಗಂಗಾಧರ**— ಅದ್ಸರಿ ಕಿಟ್ಟಿ! ಮದ್ವೆ ಕೂಡಿದ್ರೂ ದೊಡ್ಡಪ್ನ ಮುದಿ ಮುಖ ನೋಡಿದವ್ರೋಳ್ಗೆ ಯಾವ ತಾಯಿತಂದೆ ತಾನೇ ಒಪ್ಪೀ ಒಪ್ಪಿ ಮೃತ್ಯುಗೇ ಕೊಟ್ಟು ಮದ್ವೆಮಾಡ್ತಾರೆ?

**ಕಿಟ್ಟಿ**— ನಿನ್ನದು ಶುದ್ಧ ತಪ್ಪು ತಿಳಿವಳಿಕೆ. ಕೇಳು, Heartless parents ತುಂಬಿರೋ ನಮ್ದೇಶ್ದಲ್ಲಿ ಇದಕ್ಕೇನೂ ಕೊರತೆಯಿಲ್ಲ. ದುಡ್ಡಿನಾಶೆಗೆ ಏನು ಬೇಕಾದರೂ ಮಾಡೋಕೆ ಸಿದ್ಧವಾಗಿದ್ದಾರೆ. ಕೈಯಾರೆ ಹುಡಗೀರ್ನ ವಾರಿ ಅವ್ರು ವಿಧವೆಯರಾಗೋದ್ನೋಡಿ ಹೀಯಾಳ್ಸಿ, ಹಳಿದು, ನಿಕೃಷ್ಟವಾಗ್ಕಂಡು 'ಗುಂಡೂ' ಹೇಳೋ ಹಾಗೇ ತಲೇನ ಸಾರ್ಸಿ ಗುಡ್ಸಿ ಹಣೆಗೆ ರಂಗೋಲಿ ಇಟ್ಟು, ಕೆಂಪಿನ ಸೀರೆ ಉಡ್ಸಿ, ಹುಟ್ಟಿದ್ಮಕ್ಕಳ್ನೆಲ್ಲಾ ಹೆಣ್ಣು ಖುಷೀರ್ನಾಗಿ ಮಾಡಿ ಕೂರಸ್ತಾರಲ್ಲಾ ಇವರೇನು ಮನುಷ್ಯರೇ ಪಿಶಾಚಿಗಳೇ? ನಮಗೆ ಪ್ರೌಢವಾದ ಸಂಸ್ಕೃತಿಯಿದೆ, ಜಗತ್ಪ್ರಸಿದ್ಧವಾದ ನಾಗರಿಕತೆಯಿದೆ–ಎಂತಾ ಸಾರ್ತಾರಲ್ಲಾ ಯಾತಕ್ಕೆ ಸುಡೋದಿಕ್ಕೆ! ಇವರೆಷ್ಟು ಸಂಸ್ಕೃತರಾಗಿದ್ರೇನು, ಎಷ್ಟು ವೇದಾ ಉಪನಿಷತ್ತು ಪಾರಾಯಣ ಮಾಡಿದ್ರೇನು–ಎಷ್ಟು ಕಾಶೀರಾಮೇಶ್ವರ ಯಾತ್ರೆ ಮಾಡಿದ್ರೇನು? ೮–೯ ವರ್ಷದ ಮಕ್ಕಳ್ನ ವಿಧವೇರ್ನಮಾಡಿ ಕೂರ್ಸೋವಾಗ ವಯಸ್ಸಿಂದ ಮೇಲೆ ಅವರ್ಗೇನು ನಮ್ಹಾಗೆ Passions ಇಲ್ವೇ–Desires ಇಲ್ವೇ? ಎಲ್ಲಾರ್ಹಾಗೆ ತಾವೂ ಸಂತೋಷವಾಗಿರ್ಬೇಕು, ಮಕ್ಕಳೂ ಮರಿ, ಒಡನೆ ವಸ್ತು ಎಲ್ಲಾ ಹೊಂದಿ ಆನಂದವಾಗಿರ್ಬೇಕು ಎನ್ನೋ ಆಸೆ ಇರೋದಿಲ್ವೇ? ಗಂಗೂ, ಯೋಚನೆ ಮಾಡು, ಪ್ರಪಂಚದಲ್ಲಿ ಮನುಷ್ಯ ಬದ್ಕಿರೋದ್ಯಾತ್ರಿಂದ? ನಾಲ್ಕು ಜನ ನನ್ನ ಪ್ರೀತಿಸ್ತಾರೆ-

ನನ್ನ ಸುಖದುಃಖದೊಂದಿಗೆ ಬೆರೀತಾರೆ ಎನ್ನೊ Magnetic Attraction ಇಂದಲ್ವೇ! ಯಾರೂ ಬೇಡದ್ವಸ್ತು ಇದ್ದೇನು ಫಲ ಎನ್ನೊ ಉದ್ಧಾರ ಆ Girl widows ಬಾಯಲ್ಲಿ ಬಂದು ಅವರ ಜೀವಿತಾನೇ miserable ಮಾಡಿಬಿಡುತ್ತಲ್ಲಾ! ನಮ್ಮ ಹುಳುಕು ತಿಳಿದ್ಕೊಂಡು ಇತರ Religionists ನಮ್ಮ oppressed people ಗೆ attractive offers ನೀಡ್ತಾಯಿದ್ದಾರೆ. ನಾವು ಹೀಗೇ indolent ಆಗ್ಯೇಯಿದ್ರೆ ಹಿಂದೂ ದೇಶ ಎನ್ನೊ ಹೆಸರೂ ತೊಡೆದು ಹೋಗತ್ತೆ. ಚಿಕ್ಕೋರಾದ್ರೂ ಮನಸ್ಮಾಡಿ ಈ ರೋಗ ವಾಸಿ ಮಾಡ್ಲೇಬೇಕು ಗಂಗೂ—

**ಗಂಗಾಧರ**— ಇದು ಸಾಧ್ಯವೇ-Practicableಯೇ! youths ಯೆಲ್ಲಾ ಶುದ್ಧ impetuous ಅಂತ ಹಿರಿಯರನ್ನೋದರಲ್ಲಿ ಏನೂ ಅರ್ಥವೇ ಇಲ್ವೇ ಕಿಟ್ಟೂ! ಸಾಧ್ಯವಾಗ್ದೇಯಿದ್ದದ್ದಕ್ಕೆ ನಾವು ಕೈಹಾಕಿ ಸೋತರೆ, ನಗೆಗೀಡಾಗ್ತೇವಲ್ಲಾ.

**ಕಿಟ್ಟಿ**— ಗಂಗೂ, ಸತ್ಕಾರ್ಯದ ವಿಚಾರ ನಿನ್ನ ಮನಸ್ನಲ್ಲಿ ಎಷ್ಟು ಒಪ್ಪಿಗೆಯಿದ್ರೂ action ಗೆ ತರಬೇಕಾದಗ ನೀನು coward ಕಣೋ! ಸಾಧ್ಯವೇ-impetuous ಅಂತಾರಲ್ಲಾ - ನಗೆಗೀಡಾಗ್ತೀವಲ್ಲಾ ಎಂತ ಕುಳಿತ್ಕೊಂಡ್ರೆ ಕೆಲಸ್ವಾಗೋದ್ಹ್ಯಾಗೆ ನೀನೇ ಆಲೋಚಿಸು. ಮನುಷ್ಯನಿಗೆ ಯಾವುದು ಅಸಾಧ್ಯ. ನಾವು ಮನಸ್ಮಾಡಿ ತ್ರಿಕರಣ ಶುದ್ಧಿಯಾಗಿಕೆಲ್ಸಕ್ಕೆ ಕೈಹಾಕೋದೇ ಬಾಕಿ-Success ದೊರಕುತ್ತೊ ಇಲ್ವೋ ನೀನೇ ನೋಡುವಂತೆ! ಈ ಕೆಲ್ಸಾನ Selfishness ಯಿಂದ ನಾವ್ಮಾಡ್ತಿಲ್ಲವಷ್ಟೆ. ಇನ್ನು ಭಯವೇನು? ಮನುಷ್ಯನಿಗ್ಯಾವಾಗಲೂ ಕೆಟ್ಟ ಕೆಲ್ಸಗಳ್ನ ಮಾಡೋದಿಕ್ಕೆ ಭಯವಿರೋದಿಲ್ಲ. ಆದರೆ ಒಳ್ಳೆ ಕೆಲ್ಸಗಳನ್ನು ಮಾಡಬೇಕೂಂದರೆ ದೇವರ ಭಯ-ಸಮಾಜಭಯ-ರಾಜಭಯಗಳೆಲ್ಲಾ ರಾಶಿ ರಾಶೀಲಿ ಬರತ್ತಲ್ವೆ? Rise up ಗಂಗೂ, Rise up to the occasion. Don't be a fossil. ಈಗ ಹ್ಯಾಗೂ Handy ಯಾಗಿ ಒಂದವಕಾಶ ಸಿಕ್ಕಿದೆ.

ನಿಮ್ಮ uncle ಗೆ ಹ್ಯಾಗಾದರೂ ಬುದ್ಧಿ ಕಲ್ಸಿ-ಅವನು ಬಡ ಹುಡುಗಿಯೊಬ್ಳ ತಲೇಮೇಲೆ ಕಲ್ಲೆತ್ತಿ ಹಾಕೋದ್ನ ಖಂಡಿತ ನಿಲ್ಲಿಸ್ಬೇಕಾಗಿದೆ. ಹ್ಯಾಗೆ ಮಾಡೋಣ. ಮುದುಕನ ಮೆದುಳಿಗೆ ಬುದ್ಧಿ ಹ್ಯಾಗೆ ತುಂಬೋಣ. ನೀನು ದೊಡ್ಡಪ್ನದೂರಿಗೆ ಧೈರ್ಯವಾಗ್ನಿಂತು 'ಈ ರೀತಿ ನಡೆಯೋದು ಚೆನ್ನಾಗಿಲ್ಲಾ'ಂತಾ ಯಾಕೆ ಹೇಳಬಾರದು ?

**ಗಂಗಾಧರ**— ಹಾಗೆ ನಾನ್ಮಾಡ್ತೂಂದ್ರೆ ಆಗ್ದೇಯಿರೋ ಕೆಲ್ಸಾ ಆಗ್ಮಾಡಿ ಕೊಟ್ಟ ಹಾಗಾಗುತ್ತಷ್ಟೆ. ನಮ್ಮ uncle ವಿಚಾರ ನಿನಗ್ಗೊತ್ತಿಲ್ಲ. ಮಹಾರಾಯ ಒಂದಕ್ಕೂ ಕೈಹಾಕಲ್ಲ - ಒಂದ್ಸಲ ಹಾಕ್ತೋ ತ್ರಿನೇತ್ರ ಬಂದ್ರೂ ಸಾಧಿಸ್ದೆ ಬೇರೆ ಬಿಡೋಹಾಗಿಲ್ಲ. ಇದಕ್ಕೆ ಬೇರೆ ಏನಾದರೂ ಚಿಕಿತ್ಸೆ ಹುಡುಕು.

**ಕಿಟ್ಟಿ**— (ಸ್ವಲ್ಪ ಹೊತ್ತು ಯೋಚಿಸಿ-ನಗೆಮೊಗದಿಂದ) ನಾನು ಪತ್ತೆ ಮಾಡ್ದೆ. ಗಂಗೂ-ನೋಡು-ಈ ಉಪಾಯ ಸರಿಹೋಗುತ್ತೇನೋ. (ಗಂಗಾಧರನ ಕಿವಿಯಲ್ಲಿ ಹೇಳುವನು)

**ಗಂಗಾಧರ**— (ವಿಸ್ಮಯದಿಂದ) ಇದು ಸಾಧ್ಯವೇ ? Successful ಆಗಿ ನೀನ್ಮಾಡ್ತೀಯಾ ?-ಐಬು ಗೊತ್ತಾಗ್ದಾಹಾಗೆ ಮಾಡ್ತೀಯಾ ? ಆದರೆ ಮುಂದಾದ್ರು ಹೆಣ್ಣು ಕರ್ಕೊಂಬರೋವಾಗ Brother ಬರಬೇಕಲ್ಲ ! ಅಲ್ದೆ ನಾನಿಲ್ಲೇ ಇದ್ದು Correspondence ನಡ್ಸೋದು ಹೇಗೆ ?

**ಕಿಟ್ಟಿ**— ನನ್ನವಿಚಾರ್ದಲ್ಲಿ ಸಂದೇಹ್ವೇ ? ಸಾಧ್ಯವಾಗ್ದೇಯಿರೋದ್ನ ನಾನೆಂದಿಗಾದ್ರೂ Suggest ಮಾಡ್ತೇನ್ಯೆ ? ನೀನು ಹೇಳೋದೂ ಸರಿಯೇ-ನಮ್ಮ ಮಾಧು, ರಾಜು ಹ್ಯಾಗೂ city ಲೇ ಇದ್ದಾರೆ. Vaccationಗೆ ಊರಿಗೆ ಹೋಗಿಲ್ಲಾಂತ ಹೇಳಿದ್ರು. ಅವರನ್ನಾ ನೆಕ್ಕಟ್ಟ ಎಲ್ಲಾ ಆಗ್ಮಾಡ್ತೀನಿ.

**ಗಂಗಾಧರ**— ಇದ್ರಿಂದ ನಿನಗಪಾಯವಾಗೋದಿಲ್ವೇ? Society ನಿನ್ನೋಡಿ, ನಕ್ಕು ಹೀಯಾಳ್ಸೋದಿಲ್ವೇ? ಅದಲ್ದೆ ಆ ಕಾಲ್ದಲ್ಲಿ ನಿಮ್ಮೋರ್‍ನೋರ್‍ಯಾರಾದ್ರೂ ಹುಡುಕ್ಕೊಂಡು ಬಂದ್ರೇನ್ಗತಿ?

**ಕಿಟ್ಟಿ**— ಏನೂ ಯೋಚನೆ ಮಾಡಬೇಡ ಗಂಗೂ-ದೇವ್ರೆಲ್ಲಾ ಅನುಕೂಲ ಮಾಡಿಯೆ ಕೊಟ್ಟಿದ್ದಾನೆ. ನನ್ನ ಹುಡಿಕ್ಕೊಂಡು ಬರೋದಿಕ್ಕೆ ಯಾರಿದ್ದಾರೆ? ಅಣ್ಣನೇ ತಮ್ಮನೇ, ತಂದೆಯೇ, ತಾಯಿಯೇ-ಯಾರಿದ್ದಾರೆ? ನನಗಿರೋಳೆಲ್ಲಾ ನಮ್ಮಜ್ಜಿಯೊಬ್ಬಳೇ ಬಳಗ. ಊರಿಗ್ಹೋಗಿ ಬರ್ತೀನಿ ಅಂತ ಹೇಳಿ ಹೊರಟ ಶಾಸ್ತ್ರಮಾಡಿದ್ರೆ ತೀರ್‍ತು. ಅವಳ ಪಾಡಿಗವಳು ಸ್ವಸ್ಥವಾಗಿ ರಾಮಾಕೃಷ್ಣಾನ್ನೊಂಡು ನಾನು ಬರೋವರ್‍ಗೂ ಸುಮ್ನಿರ್ತಾಳೆ ನನಗಾಗಿ ಏನೂ ಯೋಚನೆ ಮಾಡ್ಬೇಡ ಗಂಗೂ. ಸಮಾಜದ ಎದುರಿಗಾಗಿ ನಿಂತು ನನ್ನ ideals ಗಾಗಿ ಕಾದಿ ಜಯ್ಸೋಶಕ್ತಿ ದೇವರು ಕೊಟ್ಟಿದ್ದಾನೆ. 'ಧರ್ಮಯುದ್ಧ ಇದು ಹೊಡಿ ಅರ್ಜುನ' ಅಂತ ನಮ್ಗುರು ದ್ವಾಪರದಲ್ಲಿ ಪಾರ್ಥನ ಸಾರಥ್ಯ ಕೂಡ ಮಾಡ್ಬಿಟ್ಟ ಇನ್ನು ನನ್ನ ಬೆನ್ನುಕಾಯ್ದೆ ಬಿಡ್ತಾನ್ಯೆ? ಕ್ರಿಮಿಕೀಟಗಳೂ ಹುಟ್ಟಿ ಸಾಯತ್ವೆ. ಮನುಷ್ಯನು ಹುಟ್ಟಿ ಸಾಯ್ತಾನೆ. ಏನು ವ್ಯತ್ಯಾಸ. 'ಪುನರಪಿ ಜನನಂ ಪುನರಪಿ ಮರಣಂ' ನಿಜಾ ಇದ್ರೂ, ಶಾಶ್ವತವಾದ ಸೇವೆ ಮಾಡಿ, ಕಾರ್ಯರಂಗದಲ್ಲೇ ವೀರನ ಹಾಗೆ ಸಾಯೋನಿಗೆ ಪುನರಪಿ ಜನನವೂ ಇಲ್ಲ ಪುನರಪಿ ಮರಣವೂ ಇಲ್ಲ. ಅವನ ದೇಹ ಇಲ್ದೆ ಇದ್ರೂ ಅವನ ಕೆಲಸ, ಅವನ ಹೆಸರು ಚಿರಸ್ಥಾಯಿಯಾಗಿ ಉಳಿದೇ ಉಳಿಯತ್ವೆ. ಹೀಗಿರ್‍ತಾ ನಾವು ಯಾರಿಗೆ, ಯಾತಕ್ಕೆ ಹೆದರ್‍ಬೇಕು ಗಂಗೂ.

**ಗಂಗಾಧರ**— ನನ್ನ ಕ್ಷಮಿಸು. ನೀನು Living God! ದೇವಸ್ಥಾನಗಳಲ್ಲಿರೋವೆಲ್ಲಾ Lifeless images. ನನ್ನ ಕ್ಷಮಿಸು ಕಿಟ್ಟೀ.

(ಇಬ್ಬರೂ ನಿಷ್ಕ್ರಮಿಸುವರು)

---

## ದೃಶ್ಯ ೬

(ಕಾಲೇಜ್ ಹಾಸ್ಟಲಿನ ಒಂದು ಕೋಣೆ. ಮಾಧು, ರಾಜು ಇಬ್ಬರೂ ಇದ್ದಾರೆ. ರಾಜು ಹಾಸಿಗೆ ಬಿಚ್ಚಿ ಹಾಕುತ್ತಾ ಗಂಭೀರ ವದನನಾಗಿದ್ದಾನೆ ಮಾಧು ಒಂದು ಫಿಲ್ಮ್ ಪತ್ರಿಕೆ ನೋಡುತ್ತಾ ಗ್ರಾಮಫೋನ್‌ನಲ್ಲಿ ಒಂದು ಫಿಲ್ಮ್ ಹಾಡು ಹಾಕಿ ಕೇಳುತ್ತಿದ್ದಾನೆ. ರಿಕಾರ್ಡು ಮುಗಿಯಲು ಮಾಧು ರಿಕಾರ್ಡುಗಳ ಆಲ್ಬಮ್ ನೋಡುತ್ತ ಬೇರೆ ರಿಕಾರ್ಡು ಆರಿಸಲು ಯತ್ನಿಸುತ್ತಿದ್ದಾನೆ)

**ರಾಜು**— ಸಾಕುಮಾಡು ಮಾರಾಯ. ನಿನ್ನ ಹಾಳು ಫಿಲ್ಮ್ ಹಿಟ್ಸ್.

**ಮಾಧು**— ಯಾಕಯ್ಯಾ Mr. Highbrow.

**ರಾಜು**— ಯಾರಯ್ಯಾ ಕೇಳಬೇಕು ಈ ಕರ್ಮ – ಓಹೋಹೋ! ಆಹಾಹಾ!! ಏನು ಸಂಗೀತವೋ – ಏನು ರಸಿಕರೋ ನೀವು – ಕಂತೆಗೆ ತಕ್ಕ ಬೊಂತೆ!

**ಮಾಧು**—ಇಲ್ಲ – ಸದಾ ನಿನ್ನ 'ಮೋಕ್ಷಮುಗಲದಾ' ಹಾಕಿರಬೇಕೇನು (ಹಾಡನ್ನು ಅಣಕಿಸುವನು)

**ರಾಜು**— ಅದನ್ನಾದರೂ ಕೇಳಿದರೆ ಕಿವಿ ಪವಿತ್ರವಾಗುತ್ತದೆ.

**ಮಾಧು**— ರಾಜು, ತಲೆ ಬೋಳಿಸ್ಕೊಂಡು ಯಾವದಾದರೂ ಮಠದ ಸ್ವಾಮಿಯಾಗಿ ಹೋಗಿಬಿಡೋ? ನಿನ್ನ Views expound ಮಾಡೋದಿಕ್ಕೆ ಒಳ್ಳೇ ಕ್ಷೇತ್ರ ಸಿಕ್ಕತ್ತೆ.

**ರಾಜು**— ಮಠದಲ್ಲಿ ಏನಿದೆಯೋ ಮಣ್ಣು! ಬರೀ ಪಾಪದ ಕೊಂಪೆ. ನಿನ್ನ ಫಿಲಂ ಕಂಪೆನಿಗಳು ಬೇಕು, ಈ ಮಠಗಳು ಬೇಡಪ್ಪಾ.

(ಮಾಧು ನಸುನಗುತ್ತಾ ಬೇರೊಂದು ರಿಕಾರ್ಡು ಹಾಕುವುದರಲ್ಲಿರುವನು).

**ರಾಜು**— ಬೇಡ ಮಾಧು. For heaven's sake stop your repulsive records. ಇನ್ನೊಂದು ರಿಕಾರ್ಡ್ ನೀನು ಹಾಕಿದರೆ

ಗ್ರಾಮಫೋನು, ರೆಕಾರ್ಡು ಪೆಟ್ಟಿಗೆ ಎಲ್ಲಾ ತೆಗೆದು ನಾನು ಹೊರಗೆ ಎಸೆದು ಬಿಡುತ್ತೇನೆ ನೋಡು.

**ಮಾಧು**— (ಅಸಮಾಧಾನದಿಂದ ರೆಕಾರ್ಡನ್ನು ಪೆಟ್ಟಿಗೆಗೆ ಹಾಕಿ, ಗ್ರಾಮಫೋನು ಬಾಗಿಲು ಮುಚ್ಚುವನು) ಈಗ ಸಮಾಧಾನವಾಯಿತೇನಯ್ಯಾ ?

**ರಾಜು**— Thank you my Boy.

**ಮಾಧು**— (ಫಿಲ್ಮ್ ಪತ್ರಿಕೆ ತಿರುವಿಹಾಕುತ್ತಾ) ಕಿಟ್ಟಿ ಏನಾದನೋ ? ಅವನಿಲ್ಲದಿದ್ದರೆ ಹೊತ್ತೇ ಹೋಗಲ್ಲಪ್ಪಾ.

**ರಾಜು**— ಗಂಗಾಧರನ ಊರಲ್ಲಿ ರಾಗಿಮುದ್ದೆ ಹೊಡೀತಿದ್ದಾನೇಂತ ಕಾಣತ್ತೆ.

(ಕಿಟ್ಟಿ ಪ್ರವೇಶಿಸುತ್ತಾ)

**ಕಿಟ್ಟಿ**— ಇಲ್ಲಯ್ಯಾ. ಹಾಸ್ಟೆಲಿನಲ್ಲಿ ಹಲ್ವಾ ಹೋಡೆಯೋಕೆ ಬಂದಿದ್ದೇನಿ.

(ಇಬ್ಬರೂ ಅವನನ್ನು ಸ್ವಾಗತಿಸುವರು)

**ಮಾಧು**— ಯಾವಾಗ ಬಂದೆಯಮ್ಮ.

**ಕಿಟ್ಟಿ**— ಇದೇ ಈಗ Dirty ಬಸ್‌ನಲ್ಲಿ.

**ರಾಜು**— How is the dear old Ganges!

**ಕಿಟ್ಟಿ**— So So!

**ಮಾಧು**— Think of the devil and there he is ಅಂದ ಹಾಗೇ ಆಯ್ತಲ್ಲೋ. ಇದೇ ನಿನ್ನ ವಿಷಯ ಮಾತಾಡ್ತಿದ್ವು–ನೀನೇ ಅವತರಿಸಿ ಬಿಟ್ಟೆ. ಯಾಕೆ ಹಳ್ಳಿ ಬೇಜಾರಾಯಿತೇನು ?

**ಕಿಟ್ಟಿ**— Duty first my Boy-Pleasure Last!

**ರಾಜು**— Last ಓ–Lost ಓ ! !

**ಕಿಟ್ಟಿ**— ಆಸ್ಕರ್ ವೈಲ್ಡ್ ಅವತಾರ ಕಣೋ ನೀನು–ಪೆಚ್ಚು ಮುಂಡೇದೇ !

**ಮಾಧು**— ಏನಮ್ಮಾ ಅದು–ರಾಜಕಾರ್ಯ.

**ಕಿಟ್ಟಿ**— ಗಂಗೂನ ಉದ್ಧಾರಮಾಡಬೇಕಾಗಿದೆ. Poor boy-he is in hot waters.

**ರಾಜು**— ಏನಾಗಿದೆ ಅವನಿಗೆ ?

**ಕಿಟ್ಟಿ**— ಅವನಿಗೇನೂ ಆಗಿಲ್ಲ. ಅವನ ದೊಡ್ಡಪ್ಪನಿಗೆ Romance ಪಿತ್ಥ ನೆತ್ತಿಗೇರಿದೆ.

**ರಾಜು**— ಮನೆಗೇನಾದರೂ Stepny ಪ್ರವೇಶವಾಗಿದೆಯೇನು ?

**ಕಿಟ್ಟಿ**— ಅಂಥಾದ್ದೇನೂ ಇಲ್ಲ. ಮುದುಕ ಮದುವೆಮಾಡಿಕೊಳ್ಳ ಬೇಕೂಂತ ಪ್ರಯತ್ನಮಾಡ್ತಾ ಇದ್ದಾನೆ–Bangalore Herald ನಲ್ಲಿ ಪ್ರಕಟನೆ ಕೊಟ್ಟಿದ್ದಾನೆ.

**ರಾಜು**— ಮಾಡಿಕೊಳ್ಳಲಿ ಅದರಿಂದ ನಿನಗೇನು ಕಷ್ಟ. ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡಿಸೂಂತ ಆರ್ಯೋಕ್ತಿ–ನೀನು ವಿವಾಹಘಾತುಕನಾಗಿ ಹೊರಟ್ಟಿದ್ದೀಯಲ್ಲಯ್ಯ ಕಲಿಯುಗದ ಕಂಸ!

**ಕಿಟ್ಟಿ**— ಕಂಸನಿಗೂ ಮದುವೇಗೂ ಏನೋ ಸಂಬಂಧ–idiot !!

**ರಾಜು**— ಕಂಸ ಮಕ್ಕಳ ಸಂಹಾರ ಮಾಡ್ತಿದ್ದ, ಕಿಟ್ಟಿ ಮದುವೆ ಸಂಹಾರ ಮಾಡ್ತಾನೆ ಅಷ್ಟೇ !

**ಕಿಟ್ಟಿ**— ಕಾಲ ಕಳೆಯೋಕೆ ಹೊತ್ತಿಲ್ಲ. ಗಂಗಾಧರನ ಗತಿ ಏನು ಮಾಡ್ತೀರಿ ಹೇಳಿ. ಮುದುಕ ಈಗ ಮದ್ವೆಮಾಡಿಕೊಂಡು ಒಂದು

ಹೆಣ್ಣುಗೊಂಬೆ ಮನೆ ಸೇರಿಸಿದನೋ ಗಂಗಾಧರನ future ಎಲ್ಲಾ futile ಆಗಿಹೋಗತ್ತೆ.

**ರಾಜು**— All for one! One for all!!

**ಮಾಧು**— ನಾವು four Mosquitos ಅಲ್ವೇ?

**ಕಿಟ್ಟಿ**— ನಾನು ಒಂದು plan ಸಿದ್ಧಮಾಡಿಕೊಂಡು ಬಂದಿದ್ದೇನೆ.

**ರಾಜು**— As big as ಕನ್ನಂ-ಬಾಡಿ.

**ಕಿಟ್ಟಿ**— As big as ಕನ್ಯೆ-ಅಂಬಾಡಿ.

**ರಾಜು**— ಹೇಳಿ ಸಾರ್, Let us have a piece of your brilliance.

**ಕಿಟ್ಟಿ**— Serious ಆಗೋ. ನಿನ್ನ ಜನ್ಮದಲ್ಲಿ ಒಂದುಗಳಿಗೆ. For a change serious ಆಗೋ!

**ಮಾಧು**— ಅವನು Serious ಆಗಬೇಕಾದರೆ film records ಹಾಕಬೇಕು ನೋಡು ಕಿಟ್ಟಿ.

**ರಾಜು**— ಬೇಡ ಮಾರಾಯ. ಹೇಳು ಕಿಟ್ಟಿ. I am all serious.

**ಕಿಟ್ಟಿ**— ನೀನು-ರಾಜು, ಗಂಗಾಧರನ ದೊಡ್ಡಪ್ಪ ಕೊಟ್ಟಿರುವ ಅಡ್ವರ್ಟೈಸ್‌ಮೆಂಟಿಗೆ answer ಮಾಡಬೇಕು.

**ರಾಜು**— ಏನೂಂತ.

**ಕಿಟ್ಟಿ**— ನನಗೆ ಇಪ್ಪತ್ತು ವಯಸ್ಸಿನ ಒಬ್ಬ ತಂಗಿಯಿದ್ದಾಳೆ. ನಾವಿಬ್ಬರೂ ಅನಾಥರು. ನೀವು ದೊಡ್ಡ ಮನಸ್ಸುಮಾಡಿ ಅವಳನ್ನು ಮದುವೆಯಾಗಿ ಕನ್ಯಾಸೆರೆ ಬಿಡಿಸಬೇಕೂಂತ.

**ರಾಜು**— ಆ ಪಾಪ ನನ್ನ ತಲೇಗೆ ಯಾಕೆ ಕಟ್ತೀಯೋ? ನಂಗೆ ನಾಲ್ಕುಜನ sister ಇದ್ದಾರಲ್ಲೋ.

**ಕಿಟ್ಟಿ**— ತೆಗೆದೆಯಲ್ಲಾ ನಿನ್ನ ಕಂತೇನ.

**ರಾಜು**— ಆಯಿತು-Negotiate ಮಾಡಿದೆ, ಮುದುಕ ಒಪ್ಪಿಕೊಂಡ-ಮುಂದಿನ ಗತಿ......ವಧು ಯಾರನ್ನು ಹುಡುಕೋಣಯ್ಯ.

**ಕಿಟ್ಟಿ**— ಮಾಧು.

**ಮಾಧು**— ನಾನೇ! ನಿನಗೆ ಹುಚ್ಚು ಹಿಡಿದಿದೆ ಕಿಟ್ಟಿ.

**ಕಿಟ್ಟಿ**— ನೋಡು ಮಾಧು-ಕಾಲೇಜಿನಲ್ಲಿ ನೀನು Ace Lady-character player. ನಿನ್ನ ರೂಪ-ಧ್ವನಿ-ಹಾವಭಾವದಿಂದ make-up ನಲ್ಲಿ ನೀನು Born-woman ಹಾಗೇ ಕಾಣ್ತೀ.

**ಮಾಧು**— ನಾಟಕದಲ್ಲಿ ಹೆಣ್ಣು ಪಾರ್ಟು ಮಾಡೋದಿಕ್ಕೂ ಈಗ ಹೆಣ್ಣು ವೇಷಹಾಕಿಕೊಂಡು ಮದುವೆ-ನಿಜವಾದ ಮದುವೆ-ಮಾಡಿ ಕೊಳ್ಳೋದಿಕ್ಕೂ ವ್ಯತ್ಯಾಸವಿಲ್ಲವೇನಯ್ಯಾ?

**ಕಿಟ್ಟಿ**— ಇದೆ. ಅದು ನಾಟಕ-unreal; ಇದು ಜೀವನ-ನಾಟಕ-Real. Will you rise up to the occasion?

**ಮಾಧು**— (ಯೋಚಿಸಿ) ನಂಗೆ ಧೈರ್ಯವಿಲ್ಲಮ್ಮಾ. These old fellows are bopelessly romantic.

**ಕಿಟ್ಟಿ**— ರಾಜೂ-ಮುಗೀತಪ್ಪಾ ಗಂಗಾಧರನ ಗತಿ.

**ರಾಜು**— ಮಾಧೂ, ಯಾಕೋ ಶುದ್ಧ ಹೆಣ್ಣಾಳ್‌ನ ಹಾಗಾಡ್ತೀ.

**ಮಾಧು**— ಈಗ ಆಡ್ತಿಲ್ಲ. ಆಡೂಂತ ನೀವು ಪ್ರೋತ್ಸಾಹಿಸುತ್ತಿದ್ದೀರಿ-

**ಶೆಟ್ಟಿ**— ನೀನು ಮಾಡುವುದಿಲ್ಲ.

**ಮಾಧು**— ಸಾಧ್ಯವಾಗದೇ ಇರೋದನ್ನ ಹೇಳಿದರೆ ಹೇಗೆ ಮಾಡಲಿ ?

**ಶೆಟ್ಟಿ**— So our company goes into liquidation.

**ರಾಜು**— (ಮಾಧೂಗೆ) ಧೈರ್ಯ ಮಾಡು ಮಗೂ ನೀನು ಷೇರಾ ಬರ್ನಹಾರ್ ಅಪರಾವತಾರ ಎಂತಾ ಪ್ರಿನ್ಸಿಪಾಲ್ ಹೇಳಿದ್ದಾರಲ್ಲಾ ಭಯವೇನು ?

**ಶೆಟ್ಟಿ**— ಮಾಧು. A friend in need is a friend indeed. ಗಂಗೂಗೋಸ್ಕರ ನೀನು ಬೃಹನ್ನಳೆ ಆಗಬೇಕಪ್ಪಾ.

**ಮಾಧು**— (ಯೋಚಿಸಿ) ಹೆಚ್ಚು ಕಡಿಮೆಯಾದರೆ ನನ್ನ ಆಕ್ಷೇಪಿಸ ಕೂಡದು.

**ಶೆಟ್ಟಿ**— Deal—ಒಪ್ಪಿದೆ ತಾನೇ !

**ಮಾಧು**— ಒಪ್ಪದಿದ್ದರೆ ನೀವು ಬಿಡಬೇಕಲ್ಲಾ.. ರಾಹು ಕೇತುಗಳು. Make-up ಸಾಮಾನು.

**ಶೆಟ್ಟಿ**— ರವಳಪ್ಪನ ಜಾಕಾಯಿಪೆಟ್ಟಿಗೆ ಇರೋತನಕ ಭಯವೇನು ?

**ಮಾಧು**— ನಾನು ವೇಷ ಹಾಕಿಕೊಂಡು ಏನು ಮಾಡಬೇಕಯ್ಯಾ.

**ಶೆಟ್ಟಿ**— ಮುದುಕನ ಮದುವೆಯಾಗೋದು – ಅವನಿಗೆ hell of a time ಕೊಡೋದು – ಮದುವೆ ಬಿಡುಗಡೆಯಾದರೆ ಸಾಕು ಎಂದು ಅವನು ಗೋಳಾಡುವಂತೆ ಮಾಡೋದು. ಜತೆಗೆ ರಾಜು ಇರ್ತಾನೆ ಭಯಪಡಬೇಡ.

**ಮಾಧು**— ನೀನು.

**ಕಿಟ್ಟಿ**— ನಾನು ಅಲಕ್ ನಿರಂಜನ್. ಮುದುಕ ನನ್ನ ನೋಡಿದ್ದಾನೆ. ನಾನು ಹತ್ತಿರ ಸುಳಿದರೆ ಹಾಲಿಗೆ ಹುಳಿ ಹಿಂಡಿದ ಹಾಗಾಗತ್ತೆ.

**ಮಾಧು** — ಎಂದಿನಿಂದಪ್ಪಾ ಈ ನಾಟಕ.

**ಕಿಟ್ಟಿ**— ಮೊದಲು ರಾಜು correspondance ಆರಂಭಿಸಿ ನಿಷ್ಕರ್ಷೆ ಮಾಡಲಿ ಉಳಿದದ್ದು Blitz ?

**ಮಾಧು**— ಕಾಲೇಜ್ ಬಾಗಿಲು ತೆಗೆದಮೇಲೂ ನಾನು Mrs. old man ಆಗಿರಬೇಕೇನಯ್ಯಾ.

**ಕಿಟ್ಟಿ**— ಇಲ್ಲಮ್ಮ........ಅಷ್ಟರಲ್ಲಿ ಈ ಪ್ರಕರಣ ಮುಗಿಸಿಬಿಡೋಣ. — ಅನ್ನಗಿನ್ನ ಹಾಕಿಸುತ್ತೀರೋ ಇಲ್ಲಯ್ಯಾ - ಹೊಟ್ಟೆ ಬಿನ್ನಿಮಿಲ್ ವಿಸಲ್ ಕೂಗಿದ ಹಾಗೆ ಕೂಗ್ತಾಯಿದೆ.

**ರಾಜು**— ಬಾ ಹೋಗೋಣ — ಸುಬ್ಬಣ್ಣಾಚಾರಿ ಬೂದುಗುಂಬಳ ಕಾಯಿ ಮಜ್ಜಿಗೆ ಹುಳಿ ಮಾಡಿದ್ದಾನೆ.

[ ಎಲ್ಲರೂ ನಿಷ್ಕ್ರಮಿಸುವರು ]

---

## ದೃಶ್ಯ ೭.

[ಬೀದಿಯ ನೋಟ, ರಾಮಾವಧಾನಿ ಸುಬ್ಬುವಿನೊಂದಿಗೆ ಪ್ರವೇಶಿಸುವನು]

**ಅವಧಾನಿ**— ಸುಬ್ಬು ! ನಾವು ಹೋಗ್ತಿರೋದೆಲ್ಲೀಗೆ ಗೊತ್ತೇ ?

**ಸುಬ್ಬು**— ನಂಗೋತ್ತಿಲ್ಲವೇನಪ್ಪಾ-ಮದುವೇಗೆ.

**ಅವಧಾನಿ**— ನಿಮ್ಮಜ್ಜಿತಲೆ. ಮದ್ವೇಗಂತೆ ಮದ್ವೇಗೆ. ನಿನ್ನ ಶ್ರಾದ್ಧಕ್ಕೆ.—ಹಾಗೇನೋ ಹೇಳೋದು ?

**ಸುಬ್ಬು**— (ಅಳಲಾರಂಭಿಸಿ) ನಾ ಬದ್ಕಿರೋವಾಗ್ಲೇ ಶ್ರಾದ್ದ ಹ್ಯಾಗಪ್ಪಾ ಮಾಡ್ತೀ.

**ಅವಧಾನಿ**— ಆಯ್ಯೋದಡ್ಡಾ, ನಿನಗಿಷ್ಟಕ್ಕೇ ಅಳೂಬಂದ್ರೆ ಮುಂದೆ ನೀನು ವಂಶಪಾರಂಪರ್ಯವಾಗ್ಬಂದ ಪೌರೋಹಿತ್ಯ ಮಾಡ್ಕೊಂಡು ನನ್ಹಾಗೆ ಹೆಸರುವಾಸಿಯಾಗಿ ಬಾಳೋದು ಹ್ಯಾಗೋ ? ರಾಮಾವಧಾನಿಗ್ಳ ಮಗಾಂದ್ರೆ ಹ್ಯಾಗಿರ್ಬೇಕು ? ನಿನ್ಹೆತ್ತು ಹೊಟ್ಟೇಗೆ ಹಾಲು ಹುಯ್ಕೊಂಡ್ಹಾಗೇ ಆಯ್ತು.

**ಸುಬ್ಬು**— ಹಾಗೆಲ್ಲಾ ಅನ್ಬೇಡಪ್ಪಾ ನಾ ಮನೆಗ್ಬೇಕಾದ್ರೆ ಹೋಗ್ಬಿಡ್ತೀನೆ. ಹೀಗೆ ದಾರಿಯುದ್ದಕ್ಕೂ ನಿನ್ಕೈಲಿ ಬಯ್ಸ್ಕೊಳ್ಳೋಕೇ ನಲ್ಲಾ ನಾನ್ಬಂದದ್ದು !

**ಅವಧಾನಿ**— ಹೋಗಲಿ ಬಿಡು. ನಾವು ಹೋಗೋದು ಸುಮ್ನೆ ಮದ್ವೇಗಲ್ಲಾ ಮಗೂ, ರಾಯ್ರುಮನೆ ಮದ್ವೇಗೆ-ನಾಲಕ್ಕಂಬದ ತೊಟ್ಟಿ ಶೇಷಗಿರಿರಾಯ್ರು ಮನೆ ಮದ್ವೇಗೆ.

**ಸುಬ್ಬು**— (ನಸುನಗುತ್ತಾ) ಯಾವ ರಾಯರಪ್ಪಾ. ಮೊನ್ನೆ, ಒಂದು ಚಿಪ್ಪು ಬಾಳೇಕಾಯಿ-ಆರು ತೆಂಗಿನ್ಕಾಯಿ-ಮೂರೂವರ್ಸೇರಕ್ಕಿ ತಂದ್ಕೈಲ್ಲಾ ಆ ರಾಯರೊ ?

**ಅವಧಾನಿ** ಹೂ ಜಾಣಾಮರೀ—

**ಸುಬ್ಬು**— ಅವರ್ಮನ್ಲಿ ಯಾರ್ಗಪ್ಪಾ ಮದುವೇ? ಆ ಮುಂದಲೆ ಇಟ್ಕೊಂಡಿರೋ ಹುಡ್ಗನ್ಗೇ?

**ಅವಧಾನಿ**— ಅಲ್ಲಾ ಸುಬ್ಬಣ್ಣಾ, ಅವನಿಗಲ್ಲ. ಆ ಹಿಂದಲೆ ಇಟ್ಕೊಂಡಿರೋ ಮುದ್ಕನ್ಗೇ ಮದ್ವೇ. ಕೇಳು-ಹುಚ್ಚು ಮುಂಡೆ ಮದುವೇಲಿ ಉಂಡೋಣೇ ಜಾಣ ಎನ್ನೋ ಗಾದೆ ಕೇಳೀದೀಯಲ್ಲಾ. ಅದನ್ನಾವ್ಮರತ್ರೆ ಕೆಟ್ಟೆವು. ಚುರುಕಾಗಿರಬೇಕು— ಈಗ ಚುರುಕಾಗಿರಬೇಕು

**ಸುಬ್ಬು**— ಅದೇನ್ಹೇದ್ರುಬೇಡಪ್ಪಾ-ಮೊನ್ನೆ ವಿನಾಯಕನ ಚೌತಿದಿವ್ಸ ಒಳಶುಂಠಿಕೊಟ್ಟು ಹೇಳ್ಕೊಟ್ಟೆಯಲ್ಲಾ 'ನಮ್ಮನೇಲಾದ್ರೆ ಕೊಂಚ ತಿನ್ನು, ಕಂಡೋರ್ಮನೇಲಾದ್ರೆ ಹೊಟ್ಟೆ ಬಿರಿಯಾ ತಿನ್ನೂ'ಂತ ಅದನ್ನ ಮರ್ತಿಲ್ಲಪ್ಪ. ಚುರುಕ್ನಲ್ಲಿ ಪಾದ್ರಸಬೇಕಾದ್ರೂ ಪಿರಿಸ್ಬಿಡ್ತೀನಿ.

**ಅವಧಾನಿ**— ಅಯ್ಯೋ ಮಡೆಯಾ. ಇಷ್ಟೇನೇ ನಿನ್ನ ಬುದ್ಧಿಯೆಲ್ಲಾ. ಮದ್ವೇ ನಡ್ಯೋವಾಗ ನಾನು ಮಾಡೋ ಪ್ರಯೋಗಗಳ್ನೆಲ್ಲಾ ನೋಡಿಕೋ ಆವಾಗ್ತಿಳಿಯತ್ತೆ. ಅದಕ್ಕೇ ನಿನಗ್ಮೊದ್ಲು ಕೆಲವು ವಿಷಯಗಳ್ನ ಹೇಳ್ಬೇಕೂಂತಿರೋದು. ನಾ ಹೇಳೋ ವಿಷಯಗಳೆಲ್ಲಾ ವೈದಿಕ ಧರ್ಮಾನಿಸ್ಕೊಂಡು ಪ್ರಪಂಚದಲ್ಲಿ ಪ್ರಖ್ಯಾತಿಯಾಗಿವೆ.

**ಸುಬ್ಬು**— ಎಲ್ಲಾರ್ಗೂ ತಿಳಿದು ಪ್ರಖ್ಯಾತಿಯಾಗಿರೋ ವಿಚಾರ ಹೇಳೋದೇನು ಬಿಡಪ್ಪಾ. ಏನಾದ್ರೂ ಹೊಸ್ವಿಚಾರ ಹೇಳಪ್ಪಾ. ಬೆಂಗಳೂರ್ನಲ್ಲಿ ಗೋಡೆಗಳ್ಮೇಲೆ ಹೆಣ್ಣೂ ಗಂಡೂ ಪಿಶಾಚಿಗಳು ಕುಣಿಯುತ್ವಂತೆ ನಿಜ್ವೇನಪ್ಪಾ!–ಊ–ಅವತ್ತು ಶೀಬೇಹಣ್ಣು ಚೆಂಡಿನ್ಹಾಗಿರತ್ತೆ ಬೆಂಗಳೂರ್ನಲ್ಲೀಂತ ಷುರುಮಾಡ್ದೆ. ಆ ಹೊತ್ತಿಸ್ಸರ್ರ್ಯಾಗಿ ಅಮ್ಮ ಹಾಲುಕ್ಸಿದ್ಬು-ಈಗಾದ್ರೂ ಹೇಳಪ್ಪಾ.

**ಅವಧಾನಿ**— (ತಲೆ ಚಚ್ಚಿಕೊಳ್ಳುತ್ತಾ) ಅಯ್ಯೋ ಬ್ರಹ್ಮೇತಿ-ನಿನ್ನ ಕಟ್ಕೊಂಡು ಏನ್ಮಾಡ್ಬೇಕು? ಹೇಳಿದ್ದೊಂದೂ ತಿಳಿಯಲ್ಲ-ಸುಳು ಸೂಕ್ಷ್ಮ ಸ್ವಲ್ಪಾನೂ ಗೊತ್ತಾಗಲ್ಲ. ಹೀಗಿದ್ರೆ ಹ್ಯಾಗೋ ಸುಬ್ಬೂ. ಅದಿರಲಿ, ನೀನೇ ಹೇಳು, ನಾವು ದುಡ್ಡು ಮಾಡ್ಬೇಕೂಂತ ನಿಂಗಿಷ್ಟ ಇದ್ಯೋ ಇಲ್ವೋ?

**ಸುಬ್ಬು**— ಇಲ್ದೇ ಇರತ್ಯೇ! ಸದ್ಯಃ ಎಂದು ದುಡ್ಮಾಡಿ ನಂಗೊಂದು ಪವಿತ್ರದುಂಗ್ರ ಮಾಡ್ಸಿಕೊಡ್ತಿಯೋಂತಿದ್ದೀನಿ.

**ಅವಧಾನಿ**— ಸರಿಹಾಗಾದ್ರೆ-ನೋಡೂ, ಈ ಮದುವೇಗೆ ಯಾರೂ ಜನಾ ಬರೋಹಾಗೇಯಿಲ್ಲ. ವೈದೀಕರಂತೂ ತಲೇನೇ ಇಡೋದಿಲ್ಲ. ಹೆಣ್ಣೋರ್ಕಡೆ ಹೆಣ್ಣು ಅದರ-ಅಣ್ಣ ಇಬ್ಬರನ್ನ ಬಿಟ್ರೆ ಮೂರ್ನೇವರು ಇಲ್ಲ. ಒಂದೇ ದಿನ್ಸದ ಮದ್ವೇ. ಅದರ್ಮೇಲೆ ಹೆಣ್ಣಿಗೆ ಹೊಟ್ಟೆ ಶೂಲೆಯಂತೆ-ತಲೆ ಸುತ್ತುತ್ತಂತೆ-ಅವಳು ಹಸೇಮೇಲೆ ಹೆಚ್ಚೊತ್ತು ಕೂತುಕೊಳ್ಳೋಹಾಗಿಲ್ವಂತೆ-ಧಾರೆಯಾದಮೇಲೆ ರಾಯ್ರೊಬ್ಬರ್ನೇ ಕೂರಿಸಿ ಎಲ್ಲಾ ಶಾಸ್ತ್ರಾನೂ ಮಾಡಿಸ್ಬೇಕಾಗತ್ತೋ ಏನೋ? ಆದ್ರಿಂದ ದಕ್ಷಿಣೆ ವಿಚಾರ್ದಲ್ಲಿ ನಾವು ಕೊಂಚ ಹುಷಾರಾಗಿರಬೇಕು. ಸಭಾ ಪೂಜೆಗ್ಮುಂಚೆ ದಕ್ಷಿಣೆಗಳೆಳ್ಯೋದು ನಮ್ಮಾತ್ತನ ಕಾಲ್ದಿಂದ ಬಂದ್ನಡ್ತೆ. ಕೇಳು—ಗುರುದಕ್ಷಿಣೆ—ಆಚಾರ್ಯಪೂಜೆ-ಶ್ರೋತ್ರ ಮರ್ಯಾದೆ-ವಿದ್ಯಾದಕ್ಷಿಣೆ-ಮಠಮರ್ಯಾದೆ-ಸ್ಥಳ ಮರ್ಯಾದೆ-ಹೀಗೆ ನೂರಾರು ಹೇಳಿ ನಾನೊಂದೊಂದೂ ಎರಡೆರಡೂ ಎಳೀತಾ ಬರ್ತೀನಿ. ದಕ್ಷಿಣೆ ಎಲಡ್ಕೆ ಕೆಳಗಿಟ್ಟ ತಕ್ಷಣಾನೇ ಮಾತಾಡ್ದೆ ಸೊಂಟಕ್ಕೇರಸ್ತಾ ಬಾ-ತಿಳಿತೋ-ಏನಾದ್ರೂ ತಪ್ಪಿದೆಯೋ ಚಮ್ಡಾ ಹಾರಸ್ಬಿಡ್ತೀನಿ ಇನ್ನೂ ಕೇಳು-'ಕನ್ಯಾವಯಸ್ಕಳು-ಅಷ್ಟವರ್ಷಾ ಭವೇತ್ಕನ್ಯಾಂತ ವೇದೋಕ್ತಿಯಿರೋದ್ರಿಂದ ಆಚಾರ ತಪ್ಪಿದಹಾಗಾಯ್ತು-ತಮಗೆ ಬಹಿಷ್ಕಾರ ಹಾಕಿಸ್ಬೇಕೂಂತ ವೈದಿಕ ಮಹನೀಯರು ಕೆಲವರು ಮಾತಾಡ್ಕೊತಿದ್ದಾರೆ, ಬಹಿಷ್ಕಾರ ಖಂಡಿತಾ ಸ್ವಾಮಿ' ಎಂತ ಹೆದರ್ಸಿ ಅವರ ಬಾಯಿ ಮುಚ್ಚಸ್ತೀನೀಂತ

ಮುದುಕನ ಹತ್ತಿರ ಹೇಳಿ ಒಂದಿನ್ನೂರಾದ್ರೂ ವಸೂಲ್ಮಾಡಬೇಕು. ಹುಡುಗ, ನಿನ್ನ ಕೈಲಿ ಇದೆಲ್ಲಾ ಯಾಕೆ ಮಾತು. ನಾನುಂಟು. ರಾಯರುಂಟು.

**ಸುಬ್ಬು**— ಹಾಗಾದ್ರೆ ಪವಿತ್ರದುಂಗರ ಮ-ರೀ-ದೇ.................

**ಅವಧಾನಿ**— ಹೂ ಹೂ, ನಾ ಹೇಳಿದ್ದೆಲ್ಲಾಮರೀದೆ ಮಾಡಿದ್ರೆ ಮಾಡಿಸ್ಕೊಡ್ತೀನಿ. ನೀನಿನ್ನೂ ಚಿಕ್ಕೋನು ಪ್ರವರ್ಧಮಾನ ವಾಗತಕ್ಕೋನೂಂತ ಇದೆಲ್ಲಾ ಹೇಳಿದೆ. ಎಲ್ಲಾ ಜ್ಞಾಪಕ ದಲ್ಲಿರಲಿ ಆ ಅಪ್ಪೂಭಟ್ರ ಮಗ ಅಣ್ಣಾಪ್ಪನ್ನ ನೋಡು-ನಿನ್ನಷ್ಟೇ ವಯಸ್ಸು-ಆಗ್ಲೇ ಶ್ರಾದ್ಧ ಕೂಡ ಮಾಡಸ್ತಾನೆ. ಅವನ್ನೋಡಿ ನಿನಗ್ನಾಚ್ಕೆಯಾಗ್ಬೇಡ್ವೇ. ಹೂ ನಡೀ ಹೊತ್ತಾಯ್ತು.

**ಸುಬ್ಬು**— ಅಪ್ಪಾ ಅಪ್ಪಾ, ಎಲ್ಲಾರ್ಗೂ ಮದ್ವೆ ಮಾಡಸ್ತಿ. ನಂಗೆ ಯಾವಾಗಪ್ಪಾ ಮಾಡಸ್ತಿ ?

**ಅವಧಾನಿ**— ಮಾಡಸ್ತೀನಪ್ಪಾ ಮಾಡಸ್ತೀನಿ. ಎಲ್ಲಾ ಆಯ್ತು. ಅದೊಂದು ಬಾಕಿ. ಅದೂ ಆಗಿಹೋದ್ರೆ ಪುಣ್ಯ ಪುರುಷಾರ್ಥವೆಲ್ಲಾ ಪೂರೈಸತ್ತೆ. ಬಾ ! ಹೋಗೋಣ.

(ನಿಷ್ಕ್ರಮಿಸುವರು)

---

## ದೃಶ್ಯ ೮

[ಶೇಷಗಿರಿರಾಯನ ಮನೆ ಹಜಾರ. ಹಜಾರದ ಮಧ್ಯೆ ಒಂದು ಮೇಜು ಕೆಲವು ಕುರ್ಚಿಗಳಿವೆ. ಒಂದು ಪಕ್ಕದಲ್ಲಿ ಆರಾಮಾಸನ. ಗೋಡೆಯ ಬದಿಯಲ್ಲಿ ಒಂದು ಅಲ್ಮೇರಾ. ಗೋಡೆಗಳ ಮೇಲೆ ಸಾಲಿಗೆ ದೇವರ ಪಟಗಳು. ಗೋಡೆಯ ಇನ್ನೊಂದು ಬದಿಗೆ ಒಂದು ಬೆಂಚು—ಅದರ ಮೇಲೆ ಸುತ್ತಿದ ಹಾಸಿಗೆ ರಾಶಿ.

ರಾಜು ಆರಾಮಾಸನದ ಮೇಲೆ ಕುಳಿತುಕೊಂಡು 'ಹಿಂದೂ' ಪತ್ರಿಕೆ ಓದುತ್ತಿರುವನು. ಫುಲ್‌ಸೂಟ್ ಧರಿಸಿದ್ದಾನೆ. ಕೈಯಲ್ಲಿ ಸಿಗರೇಟ್.

ಚೋರ ಕೆಳಗೆ ಕುಳಿತುಕೊಂಡು ಅವನ ಷೂಸಿಗೆ ಬಣ್ಣ ಹಾಕಿ ಉಜ್ಜುತ್ತಿದ್ದಾನೆ]

**ರಾಜು**— (ಷೂಸಿನ ಕಾಲು ಬದಲಾಯಿಸಿ) ಗಟ್ಟಿಯಾಗಿ ಉಜ್ಜೋಕೆ ತ್ರಾಣವಿಲ್ಲವೇನೋ ಮಂಕೇ? ನಾಲ್ಕು ಗೋಳ ಹೊಡೆದರೂ ಇಷ್ಟೇನೆ ನಿನ್ನ ಹಣೇಬರಹ.

**ಚೋರ**— (ರಾಜುವನ್ನು ದಿಟ್ಟಿಸಿ ನೋಡಿ ಕತ್ತುತಗ್ಗಿಸಿ ಷೂಸ್ ಉಜ್ಜುವುದಕ್ಕಾರಂಭಿಸುವನು)

**ರಾಜು**— ಏನು ಮುಖ ನೋಡ್ತೀ—ಮನಸ್ಸಿನಲ್ಲಿ ಏನು ಬಯ್ದುಕೊಳ್ಳುತ್ತಿದ್ದೀ ಬೊಗಳು.

**ಚೋರ**— (ಕೈತೆಗೆದು ಸಾವಕಾಶವಾಗಿ ಕೈಗೆ ಹತ್ತಿದ ಬಣ್ಣವನ್ನು ತಂದು ವಸ್ತ್ರಕ್ಕೆ ಒರಸಿಕೊಳ್ಳುತ್ತಾ) ನಿಮ್ಮ ವಯಸ್ಸೇಟು ನನ್ನೊಡೆಯಾ?

**ರಾಜು**— ಯಾಕೋ ಅಧಿಕಪ್ರಸಂಗಿ?

**ಚೋರ**— ಸುಮ್ಮೆ ಕೇಳಿದೆ. ಎಷ್ಟೀರಾ ಬುದ್ಧಿ.

**ರಾಜು**— ಇಪ್ಪತ್ತು ನಾಲ್ಕೋ ಐದೋ ಇರಬಹುದು.

**ಚೋರ**— ನನ್ನ ವಯಸ್ಸೇಟು ಗೊತ್ತೈತಾ?

**ರಾಜು**— ಅರವತ್ತಾಗಿರಬಹುದು.

**ಬೋರ**— ಅರವತ್ತಾಗಿ-ಅದರ ಮ್ಯಾಕ್ಕೆ ಎಂಟು.

**ರಾಜು**— ಎಷ್ಟಾದರೇನಂತೆ?

**ಬೋರ**— ಏನೂ ಇಲ್ರಾ....ಇಕ್ಪತ್ತಾಕ್ಕು ಎಚ್ಚೋ ಅರವತ್ತೆಂಟು ಎಚ್ಚೋ ಎಂತಾ ಇಚಾರ ಮಾಡ್ತಿದ್ದೆ.

**ರಾಜು**— ನಿನ್ನ ಘನ ವಿಚಾರಕ್ಕೂ ನನಗೂ ಏನೋ ಸಂಬಂಧ?

**ಬೋರ**— ಈಗಿದ್ದಿದ್ರೆ ನನ್ನ ಇರೇ ಹೈದಂಗೆ ನಲವತ್ತಾಗಿರ್‍ತಿತ್ತು. ವಯಸ್ಸಿನ ಗ್ಯಪ್ತೀನೂ ಇಲ್ದೆ ಲಂಕಾದಾನದ ಹನುಮಪ್ಪನ ಅಂಗೆ ಆರಾಡ್ತೀರಲ್ಲಾ ಬುದ್ಧಿ.

**ರಾಜು**— Rascal-ನಿನ್ನ ನಾಲಗೆ ಬಹಳ ಚುರುಕು. ಅದಕ್ಕೆ ಸ್ವಲ್ಪ ಕಸೀ ಮಾಡಿಸ್ಬೇಕು.

**ಬೋರ**— ನನ್ನಾಲ್ಗೆಗಲ್ಲ ಬುದ್ದಿ-ನಿಮ್ಮ ಬುದ್ದೀಗೆ.

**ರಾಜು**— ಮುಚ್ಚೋ ಬಾಯಿ Boor.

**ಬೋರ**— (ಗಹಗಹಿಸಿ ನಗುತ್ತಾ) ಏಸಿಂಗ್ಲೀಸ್ ಕಲ್ತೆ ನಮ್ಮಪ್ಪಾ.... ಸರಿಯಾಕಿ ಬಯ್ಯೋಕೂ ಬರಾಕಿಲ್ಲ ನಾನಾದರೂ ಏಳಿಕೊಡ್ಲಾ?

**ರಾಜು**— Shut up you fool. ಹೆಚ್ಚು ಮಾತಾಡಿದರೆ Sister ಗೆ ಹೇಳಿ ನಿನ್ನ ಡಿಸ್‌ಮಿಸ್ ಮಾಡ್ಸಿಬಿಡ್ತೀನಿ

**ಬೋರ**— ಷಿಸ್ಟರ್-ಅಂಗಂದರೆ ಯಾರಪ್ಪ.

**ರಾಜು**— ಯಾರೇ-ನಿನ್ನ ಯಜಮಾನಿತಿ-ನನ್ನ ತಂಗಿ.

**ಬೋರ**— ಒಸ ಅಮ್ಮಾವರೋ? ಅವರ್ಗೂ ಕನ್ನಡ ಮಾತಾಡೋಕೆ

ಬರಾಕಿಲ್ಲ–ಯಾವಾಗ ನೋಡಲಿ, ದಿಸ್‌ಪಸ್ ಅಂತಿರ್ತಾರೆ–ನಿಮ್ಮ ಮಟದಾಗ ಕನ್ನಡ ಕಲಿಸಾಕಿಲ್ವಾ ?

**ರಾಜು**— ತಿನ್ನೋ ಅನ್ನಕ್ಕೆ ಮಣ್ಣು ಹಾಕಿಕೊಳ್ತೀ–ಪಾಪ ಬಡವ, ಹೋಗಲಿ ಎಂತಾ ನಾನಿದ್ರೆ ನಿನ್ನ ನಾಲಗೆ ಜೋರಾಯಿತು.

**ಚೋರ**— ನೋಡಿ ಬುದ್ಧಿ...ಇದು ಜೀತ ಮಾಡೋ ಜೀವ–ಮೈಮುರಿಯ–ಬೈವರು ಸುರಿಯ ದುಡೀತೀನಿ–ರಾಯರು ಒಂದು ತುತ್ತು ಇಟ್ಟು ಹಾಕ್ತಾರೆ. ಇದೇ ದುಡಿಮೆ ಎಲ್ಲಿ ಮಾಡಿದರೂ ಒಂದು ತುತ್ತು ಇಟ್ಟು ಉಟ್ಟೈತೆ. ದುಡಿಯೋ ಮಕ್ಕಳು ನಾವು ಅಂಜಾಕಿಲ್ಲ ಬುದ್ಧಿ....ನಿಮ್ಮಾಗೆ ಕಂಡೋರ ಕೂಳು ತಿಂದ್ಕೊಂಡು ಕಾಲ ಆಕ್ತಾರಲ್ಲಾ ಅಂತಾವ್ರಿಗೆ ಬಯ ...

**ರಾಜು**— (ಕೋಪಗೊಂಡು, ಕಣ್ಣಲ್ಲಿ ನೀರು ತಂದುಕೊಂಡು) ಲಲಿತಾ–ಲಲಿತಾ (ಎಂದು ಕೂಗುವನು)

(ಲಲಿತಾ ಒಳಗಿನಿಂದ 'ಏನು ರಾಜು' ಎನ್ನುವಳು) ಇಲ್ಲಿ ಒಂದು ನಿಮಿಷ ಬಾ–ಬೇಗ ಬಾ–Please

[ಲಲಿತಾ ಕೈಯಲ್ಲಿ ಹಿಡಿದಿದ್ದ ಲಿಪ್‌ಸ್ಟಿಕ್ ತುಟಿಗೆ ಹಚ್ಚಿಕೊಳ್ಳುತ್ತಾ ಪ್ರವೇಶಿಸುವಳು. ಚೋರ ಅವಳನ್ನೇ ಎವೆಯಿಕ್ಕದೆ ನೋಡುವನು]

**ಲಲಿತ**— ಏನೋ ರಾಜು–ನಿನ್ನ ಅವಾಂತರ. ನಾನು ಡ್ರೆಸ್ ಮಾಡಿಕೊಳ್ಳುವಾಗಲೂ ನಿನ್ನ ಕೂಗಾಟವೇ?

**ರಾಜು**— ನಾನು ಹೊರಟೆ–ಈಗಲೇ ಹೊರಟೆ–ನಿನಗೆ Good-Bye ಹೇಳಿಬಿಟ್ಟು ಹೋಗೋಣಾಂತ ಕೂಗಿದೆ.

**ಲಲಿತ**—(ಗಾಬರಿಯಾಗಿ) ಹೊರಟೆ ? ಎಲ್ಲಿಗೆ ? ಯಾಕೆ ?

**ರಾಜು**— Back to Bangalore. ಇಲ್ಲಿರೋಕೆ ಸಾಧ್ಯವಿಲ್ಲ. ಈ ಕಿರಾತ ನನ್ನ ಕಿತ್ತು ತಿಂದುಬಿಡ್ತಾನೆ.

**ಲಲಿತ**— (ತಿರಸ್ಕಾರದಿಂದ) ಇವನಿಗೆ ಹೆದರಿ ಓಡಿಹೋಗ್ತೀಯಾ? ಬೋರಂಗೆ—ಇದು ದೊಡ್ಡೋರ ಮನೇಲಿರೋ backless **brute** ಅನ್ನೋದು ನಿನಗೆ ತಿಳೀದೇ.

**ರಾಜು**— ಆ Brute ನ back ನಿನಗೆ ಗೊತ್ತಿಲ್ಲ. ಅವನ tongue ಉ Poniard blade ಉ; Sting ಉ ಸಾಕ್ಷಾತ್ ನಾಗಪ್ಪ!

**ಲಲಿತ**— ಏನಂದ—ಏನಾಯ್ತು. ನಿಧಾನವಾಗಿ ಹೇಳು.

**ರಾಜು**— ಏನಂದನೋ ಅವನನ್ನೇ ಕೇಳು.

**ಲಲಿತ**— ಏನಾಯ್ತೋ ಬೋರ—ಚಿಕ್ಕಯಜಮಾನ್ರು ಬಹಳ ಕೋಪ ಮಾಡಿಕೊಂಡಿದ್ದಾರೆ.

**ಬೋರ**— ಯಾರಮ್ಮಣ್ಣೀ ಚಿಕ್ಕ ಯಜಮಾನ್ರು? — ಈ ಪ್ಯಾಟೆ ಪಾರಿವಾಳಗಳೆಲ್ಲಾ ನನ್ನ ಚಿಕ್ಕಯಜಮಾನ್ರಾದರೆ ದೇವ್ರೇಗತಿ.

**ರಾಜು**— ಪೇಟೆ ಪಾರಿವಾಳ!

**ಲಲಿತ**— (ಮೃದುವಾಗಿ) ಇನ್ನುಮೇಲೆ ಇವರೇ ನಿನ್ನ ಚಿಕ್ಕ ಯಜಮಾನ್ರಪ್ಪಾ. ಗಂಗಾಧರವರ ಕಾಲ ಆಗಿಹೋಯ್ತು....

**ಬೋರ**— ಆ ಮಾತು ಬುಟ್ಟು ಬುಡ್ರವ್ವಾ....ನೀವು ಒಸ ಅಮ್ಮಾವ್ರು ....ದೊಡ್ಡಯ್ಯನೋರು ಲಗ್ಣ ಮಾಡಿಕೊಂಡವ್ರೆ .... ನಿಮ್ಮ ಸ್ಯಾವೆ ಮಾಡೋದು ನನ್ನ ಧರ್ಮ....ಆದರೆ ಈ ಪ್ಯಾಟೆ ಒಗಟು ಗಳೆಲ್ಲಾ ದಸ್‌ಪುಸ್ ಅಂದ್ರೆ ಎಂಗ್ರಮ್ಮಣ್ಣಿ ಕೇಳ್ಕೊಂಡಿರೋದು.

**ರಾಜು**— ಪೇಟೆ ಹೊಗೆ ಬತ್ತಿ!!

**ಲಲಿತ**— ನೀನು ಕೇಳದಿದ್ದರೆ ನಾನು ಕೇಳಿಸ್ತೇನೆ.

**ಚೋರ**— ಆ ಮಾತೆಲ್ಲಾ ಕಟ್ಟಿಮಡಗಿಬಿಡ್ರಮ್ಮಣ್ಣೀ...

**ಲಲಿತ**— (ಕೆರಳಿ) ನಿನ್ನ ಡಿಸ್‌ಮಿಸ್ ಮಾಡ್ಸಿಬಿಡ್ತೀನಿ...

**ಚೋರ**—ಅದೇನ್ರಮ್ಮಣ್ಣಿ ಟಿಸ್‌ಪುಸ್ ಅಂತೀರಿ... ಈ ಮಯ್ಯಾ ಅಂಗೇ ಅಂತಿದ್ದ.

**ರಾಜು**— ಏಕವಚನದಲ್ಲಿ ಮಾತಾಡಿಸಿದರೆ ನಾನು ಸುಮ್ಮನಿರೋದಿಲ್ಲ ನೋಡು.

**ಚೋರ**— ಏನಪ್ಪಣ್ಣೀ ಮಾಡ್ತೀ....

**ಲಲಿತ**— ಹೋಗಲಿ ಸುಮ್ಮನಿರೋ ರಾಜು. ..illiterate fool, ಇವನ ಹತ್ರ ನಮಗೇನು ಮಾತು ನಾನೂ ಬರ್‍ತೀನಿ ನಡೀ— ಆಳು ಕಾಳು ಕೂಡ ಗೌರವ ಕೊಡದಿದ್ದ ಮೇಲೆ ನಾನು ತಾನೆ ಇಲ್ಲೇಕೆ ಇರಬೇಕು.

**ರಾಜು**— Right! ನಡೀ Sister... ....ಭಾವಾ ....ಭಾವಾ. ....

(ಗಟ್ಟಿಯಾಗಿ ಕೂಗುವನು)

[ಅವನ ಕೂಗಿಗೆ ಗಂಗಾಧರ ಗಾಬರಿಯಾಗಿ ಓಡಿ ಬರುವನು. ಲಲಿತ ಒಂದು ಕಡೆ ಅಳುತ್ತ ನಿಂತಿದ್ದಾಳೆ.]

**ಗಂಗಾಧರ**— (ಮರ್ಯಾದೆಯಿಂದ ರಾಜುವಿಗೆ) ಏನಾಯಿತು ಸಾರ್. Father ಮನೇಲಿಲ್ಲ. ತೋಟದ ಕಡೆ ಹೋಗಿದ್ದಾರೆ. (ಲಲಿತನಿಗೆ) ಏನಾಯಿತು ಚಿಕ್ಕಮ್ಮ-ಅಳ್ತಾ ಇದ್ದೀರಿ.

**ರಾಜು**— ನಿಮಗೆ-ನಿಮ್ಮ ಆಳುಗಳಿಗೆ ತಲೇಲಿ ಬುದ್ಧಿಗಿದ್ಧಿ ಇದೆಯೇನ್ರಿ. ಮರ್ಯಾದೆಯಾಗಿ ಮಾತಾಡಿಸೋದ್ನ ಹೇಳಿಕೊಡಬೇಕೇನು? ಈ Rascal ಎಷ್ಟು insult ಮಾಡ್ತಾನೆ....

**ಗಂಗಾಧರ**— ಕ್ಷಮಿಸಿ ಸಾರ್. ಬೋರ ಎಷ್ಟಾದರೂ ಹಳ್ಳಿಯವನು-ಅವನಿಗೆ ಪೇಟೆ ನಡತೆ ಗೊತ್ತಿಲ್ಲ.

**ರಾಜು** — ನನ್ನ ಚಿಕ್ಕಯಜಮಾನ್ರು ಅಂತಾ Sister ಅಂದ್ರೆ **insult** ಮಾಡ್ತಾನೆ ಈ Blackguard - ನೀವೇನ್ರಿ ಈ ಮನೇಗೆ **ಚಿಕ್ಕ** ಯಜಮಾನ್ರು.. .ಹೇಳ್ರೀ........

**ಬೋರ**— (ಕಿರಚಿ) ಓದು ಕಣ್ರೀ... ನನ್ನ ದೊರೇನೇ ಚಿಕ್ಕಯಜ-ಮಾನ್ರು ಕಾಣ್ರೀ

**ರಾಜು** — ಕೇಳಿದಿರಾ Mr. Gangadhar. ನಿಮ್ಮೆದುರಿನಲ್ಲೇ **ಹೀಗೆ** ಮಾತಾಡೋನು ಹಿಂದೆ ಹೇಗೆ ಮಾತಾಡಿರ್ಬ್ಹೋದು.

**ಗಂಗಾಧರ**— (ವಿನಮ್ರನಾಗಿ ಕೈಜೋಡಿಸಿ) ನನಗೋಸ್ಕರ **ಕ್ಷಮಿಸಿ** ಸಾರ್.

**ರಾಜು**— ಏನ್ರೀ ಕ್ಷಮಿಸೋದು-ನಾನೂ Sisterಊ **ಈಗಲೇ** ಹೊರಟಿದ್ದೇವೆ.

**ಗಂಗಾಧರ**— ಬೇಡ ಸಾರ್. Uncleಗೆ ತಿಳಿದ್ರೆ ಬಹಳ **ಕೋಪ** ಮಾಡಿಕೋಳ್ತಾರೆ ಹೋಗಬೇಡಿಸಾರ್.. ನಿಮ್ದಮ್ಮಯ್ಯ.

**ಬೋರ**— (ಗಂಗಾಧರನ ಹತ್ತಿರ ಬಂದು-ಉಕ್ಕಿಬರುತ್ತಿರುವ **ದುಃಖ** ತಡೆದುಕೊಳ್ಳುತ್ತಾ) ಬುದ್ದಿ....ಈ ಪ್ಯಾಟೆ ಅಯ್ನೋರ್ಗೆ **ನೀವಿಂಗೆ** ಸರಣಾಗೋದು ನಾನು ನೋಡ್ಲಾರೆ ನನ್ನೊಡೆಯಾ ? **ನಿಮ್ಮ** ಮನೇಲಿ ನೀವು ಕಂಡೋರ ಕಾಲು ಇಡ್ಕೊಳ್ಳಬೇಕಾ... ....**ನಡೀರಿ** ಬುದ್ದಿ.. .ಈ ಮನೇನೆ ಬ್ಯಾಡ....ನಾನು ಸೌದೆ ಒಡೆದು **ಸಂಪಾದಿ**ಸ್ತೀನಿ... ....ನಿಮ್ಮನ್ನ ಸಾಕ್ತೀನಿ........

**ಗಂಗಾಧರ**— ಬೋರ, ಇವರನ್ನು ನೀನು ನೋಯಿಸಿದರೆ **ಧಣೀಗೆ**

ದುಃಖವಾಗತ್ತೆ. ಇವರೇ ಇನ್ಮುಮೇಲೆ ನಿನ್ನ ಚಿಕ್ಕಯಜಮಾನರು—ಈ ತಾಯಿನೇ ನಿನ್ನ ಅಮ್ಮಾವರು. ..ತಪ್ಪಾಯಿತೂಂತ ಹೇಳಿ ಕ್ಷಮೆ ಬೇಡಪ್ಪಾ (ಬೋರ ದಿಟ್ಟಿಸಿನೋಡುವನು) ನನಗೋಸ್ಕರ ಅಷ್ಟು ಮಾಡು ಬೋರ... ....

**ಬೋರ**— ನಿಮ್ಗೆ ಸಂತೋಸ ಆಗ್ತಿದ್ರೆ ಮಾಡ್ತೀನಿ ನನ್ನೊಡೆಯಾ (**ಅಡ್ಡ ಬಿದ್ದ**ದ್ದು) ಬುದ್ದಿ....ಚಿಕ್ಕ ಅಮ್ಮಾವ್ರೆ....ಆಳ್ಳೀ ಮುಂಡೇದು, ತಿಳಿದೇ ಆಡಿದ್ನ ಕ್ಸಮಿಸಿಬುಡಿ.

(ಎಂದು ಹೇಳಿ ಹೋಗುವನು)

**ರಾಜು**— Poor fellow.

**ಗಂಗಾಧರ**— ಬೋರನ್ನ ಸಂತೈಸಬೇಕು-Excuse me.

**ಲಲಿತ**— (ಗಂಗಾಧರನ ಸ್ಥಿತಿ ಕಂಡು ನಗುವಳು)

[ಗಂಗಾಧರ ನಿಷ್ಕ್ರಮಿಸುವನು. ತೆರೆ ಬೀಳುವುದು]

## ದೃಶ್ಯ ೯.

[ಹಿಂದಿನ ದೃಶ್ಯದಂತೆಯೇ. ಮೊದಲಿಗಿಂತ ಶುಚಿಯಾಗಿದೆ. ಮೂಲೆಯಲ್ಲಿ ಕಾಣುತ್ತಿದ್ದ ಜೆಂಚು, ಹಾಸಿಗೆ ಸುರುಳಿ ಮಾಯವಾಗಿವೆ.

ನಂಜಮ್ಮ ಮೊರದಲ್ಲಿ ಅಕ್ಕಿ ಹಿಡಿದು ಆರಿಸುತ್ತಿದ್ದಾಳೆ ಅದರಲ್ಲಿನ ಕಲ್ಲು, ಭತ್ತ ತೆಗೆದು ನಿಂತಿದ್ದೆಡೆಯೇ ಚೆಲ್ಲುತ್ತಿದ್ದಾಳೆ ಬೋರ ನೋಡಿ ಓಡಿ ಬರುವನು]

**ಬೋರ**— ಅಮ್ಮಣ್ಣೀ....ಅಮ್ಮಣ್ಣೀ...

**ನಂಜಮ್ಮ**— (ಕತ್ತೆತ್ತಿ ನೋಡಿ) ಏನಪ್ಪಾ ಬೋರಯ್ಯ ?

**ಬೋರ**— (ನೆಲದ ಮೇಲೆ ಬಿದ್ದಿದ್ದ ಭತ್ತದ ಕಾಳುಗಳನ್ನೂ ಕಲ್ಲನ್ನೂ ಆರಿಸಿ) ಇವತ್ತು ಎಡದ ಮಗ್ಗುಲಲ್ಲಿ ಎದ್ದರಾ ತಾಯಿ.

**ನಂಜಮ್ಮ**— ಯಾಕೋ ?

**ಬೋರ**— ತೊಟ್ಟೀಲಿ ಕಸಾ ಹಾಕ್ತೀರಲ್ಲಾ—ಚಿಕ್ಕಮ್ಮಾವ್ರು, ಚಿಕ್ಕ ಸಾಯೇಬ್ರು ಕಂಡರೆ ರಾಮಾಣ್ಯ ಮಾಡ್ಬುಡ್ತಾರೆ

**ನಂಜಮ್ಮ**— ಒಳ್ಳೇ ಶನಿಗಳು ಗಂಟುಬಿದ್ದವಲ್ಲೋ ಬೋರಾ.

**ಬೋರ**— ಮೆಲ್ಲಗೆ ಮಾತಾಡ್ರಮ್ಮಣ್ಣೀ. ಯಾರಾದರೂ ಕೇಳಿಸ್ಕೊಂಡ್ರೆ ಇನ್ನದೇ ರಂಪವಾಗ್ತೈತೆ.

**ನಂಜಮ್ಮ**— ಮನೇಲಿ ಯಾರೂ ಇಲ್ಲ. ಗಾಳಿ ಕುಡಿಯೋಕೆ ಹೋಗಿದ್ದಾರೆ.

**ಬೋರ**— ಗಂಗಾಧರಪ್ನೋರು.

**ನಂಜಮ್ಮ**— ಅವರ ಸ್ನೇಹಿತರು ಕೃಷ್ಣಸ್ವಾಮಿ ಬಂದಿದ್ದರು— ಹೋಗಿದ್ದಾರೆ.

**ಚೋರ**— ಬುದ್ಧ್ಯೋರು.

**ನಂಜಮ್ಮ**— ತೋಟದ ಕಡೆ ಹೋಗಿದ್ದಾರೆ.

**ಚೋರ**— (ನಿಟ್ಟುಸಿರುಬಿಟ್ಟು ಗಾಳಿ ಬೀಸಿಕೊಳ್ಳುತ್ತಾ) ಎಂಗಿದ್ದ ಮನೆ ಎಂಗಾಗೋಯಿತ್ರವ್ವಾ.

**ನಂಜಮ್ಮ**— ದೊಡ್ಡಮ್ಮಾವ್ರಿದ್ದಾಗ ಪೂಜೆ, ಪುನಸ್ಕಾರ ಎಷ್ಟು ಚೆನ್ನಾಗಿ ನಡೀತಿತ್ತು. ಮಹಾತಾಯಿ–ಇಂಥ ತಂಪು ಹೊತ್ತಿನಲ್ಲಿ ನೆನಿಸಿಕೋಬೇಕು. ದೇಹಿ ಎಂದವರಿಗೆ ನಾಸ್ತಿ ಎನ್ನಲಿಲ್ಲ. ಮಹಾಲಕ್ಷ್ಮಿ ಹಾಗಿದ್ರು–ಹಣೇ ತುಂಬ ಕುಂಕುಮ ಇಟ್ಟುಕೊಂಡು ಮಹಾಲಕ್ಷ್ಮಿ ಹಾಗೆ ನಡೆದುಬಿಟ್ರು. — ಅವರು ಹೋದ್ದೇ ಹೋದ್ದು ಈ ಮನೆಗೆ ಕಲಿ ಕಾಲಿಟ್ಟ ನೋಡು.

**ಚೋರ**— ಅಲ್ರಮ್ಮಣ್ಣೀ....ಅಂಥ ಮಾತಾಯಿ ಕೈ ಇಡ್ದು, ಈಗ ಈ ಪರಂಗಿ ತುಪಾಕಿ ಕೈ ಇಡ್ಯೋಕೆ ದೊಡ್ಡ ಬುದ್ಧ್ಯೋರಿಗೆ ಮನಸ್ಸು ಎಂಗೆ ಬಂತ್ರಮ್ಮಣ್ಣೀ....ಈ ಕೊಡ್ಲಿತಾವ ಅಯ್ನೋರು ನಿಜವಾಗಿ ಸಂಸಾರಾ ಮಾಡ್ತಾರಾ........ಮಾತೆತ್ತಿದರೆ ಅಣ್ಣಂಗೆ ಅಚ್ಕೊಟ್ಟು 'ನಡೀ ಬೆಂಗ್ಳೂರಿಗೆ ಒಲ್ಡೋಣ' ಅಂತಾರೆ........ದೊಡ್ಡೋರ ಮಾತು ನಂಗ್ಯಾಕೆ ಅನ್ನಿ. ..ಆದ್ರೆ ಒದುಕಿ ಬಾಳಿದ ಮನೆ ಮುರ್ದು ಬೀಳೋದು ನೋಡೋಕೆ ಆಯ್ಕಿಲ್ರಮ್ಮಣ್ಣೀ....

**ನಂಜಮ್ಮ**— ಪಾಪ, ದೊಡ್ಡ ರಾಯರಿಗೂ ಸುಖವಿಲ್ಲ ಕಣೋ. ಯಾವಾಗ ನೋಡಲಿ ಏನೋ ಯೋಚನೆ ಮಾಡ್ತಾ ಇರ್ತಾರೆ.

**ಚೋರ**— ತಮ್ಕೈಲಿ ತಾವೇ ಕಣ್ ಚುಚ್ಕೊಂಡು ನೋವಾಯಿತೂಂತ ಅತ್ರೆ ಯಾರೇನು ಮಾಡೋಕೆ ಆಯಿತ್ತೈತ್ರವ್ವಾ.

**ನಂಜಮ್ಮ**— ಎಲ್ಲರಿಗಿಂತ ಗಂಗಾಧರಪ್ಪನಿಗೆ ತುಂಬ ಕಷ್ಟ ನೋಡು.

**ಬೋರ**— ಅದ್ಯಾಕೆ ಏಳ್ತೀರವ್ವಾ. ದೊರೆಮಗ ಇದ್ದಾಗಿದ್ದ ದಣಿ, ಆ ಚಿಕ್ಕ ಯಜಮಾನಾಂತ ಕರ್‍ಕೊಳ್ಳೋ ರಾಜಪ್ಪಂಗೆ ಬಗ್ಗಿ ನಡ್ಯೋದ ನೋಡಿದ್ರೆ ಕಳ್ಳು ಕಿತ್ತು ಬತ್ತೈತ್ರವ್ವಾ. ಈ ಮನೇನೆ ಬೇಡ ನಡೀರಿ ಬುದ್ಧಿ ಓಗೋಣ–ಜೀವಣ ಎಂಗೋ ಆಗ್ತೈತೆ ಎಂತಾ ನಾನು ಏಳಿದೆ. ಅದಕ್ಕೆ ಬುದ್ಯೋರು 'ಅಂಗಲ್ಲ ಬೋರ, ದೊಡ್ಡಪ್ಪನ್ನ ಬಿಟ್ಟು ಓದರೆ ಅಪರಿಗ್ಯಾರು ದಿಕ್ಕು. ನಾಳೆ ಅವರ್‍ಗೆ ಕಾಯಿಲೆ ಕಸಾಲೆ ಆದ್ರೆ ನೋಡ್ಕೊಳ್ಳೋರು ಯಾರು? ಇಂಥ ಸಮಯದಾಗ ನಾನು ಓಗಿಬಿಟ್ರೆ ಜನ ಏನಂತಾರೆ' ಎಂದರು.

**ನಂಜಮ್ಮ**— ಒಳ್ಳೇ ತಾಯಿ ಮಗನಪ್ಪಾ. ಆ ತಾಯಿ ಗುಣವೇ ಮಗನನ್ನ ಕಾಪಾಡಬೇಕು.

**ಬೋರ**— ನಡೀರವ್ವಾ–ಅಡಿಗೆ ನೋಡ್ಕೊಳ್ಳಿ. ಇಂಗೆ ನಾವು ಆಲ್ಲೆ ಹೊಡೀತಿರೋದ ಬುದ್ಯೋರು ನೋಡಿದ್ರೆ ಸಿಟ್ಟುಮಾಡಿಕೊಂತಾರೆ.

**ನಂಜಮ್ಮ**— ಕಾಪಿಬೀಜ ತಂದೆಯೇನೋ?

**ಬೋರ**— ಇಲ್ವಲ್ರವ್ವಾ–ಮರ್‍ತುಬಿಟ್ಟೆ.

**ನಂಜಮ್ಮ**— ಹೋಗು–ಬೇಗ ತೊಗೊಂಡು ಬಾ. ಅಮ್ಮಾವರು ಗಾಳಿಸಂಚಾರ ಮಾಡ್ಕೊಂಡು ಮನೆ ಹೊಸಲು ತುಳೀವಾಗ್ಲೇ ಕಾಪಿ–ಕಾಪಿ ಅಂತ ಅರಚ್ಕೊತಾರೆ.

**ಬೋರ**—ಇನ್ನೇನ್ರವ್ವಾ ಅವರಿಗೆ ಕೆಲಸ–ಕಾಪಿ ಕುಡ್ಯೋದು, ವಸ್‌ಪುಸ್ ಇಂಗ್ಲೀಸ್ ಮಾತಾಡೋದು– (ಹೋಗುವನು)

**ನಂಜಮ್ಮ**— ಖರ್ಮ–ಖರ್ಮ–ಇದೆಲ್ಲಾ ಪೂರ್ವಾರ್ಜಿತ ಖರ್ಮ (ಎಂದುಕೊಂಡು ಒಳಗೆ ಹೋಗುವಳು)

---

# ದೃಶ್ಯ ೧೦

(ಶೇಷಗಿರಿರಾಯನ ಶಯ್ಯಾಗೃಹ. ಮೇಜಿನಮೇಲೆ ಕೆಲವು ಪುಸ್ತಕಗಳೂ, ಒಂದು ಕನ್ನಡಿಯೂ ಇವೆ. ಕೋಣೆಯ ಒಂದು ಕಡೆ ಒಂದು ಹಳೆಯ ಮಂಚ, ಹಾಸಿಗೆ. ಶೇಷಗಿರಿರಾಯ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಾ, ಮೀಸೆಯನ್ನು ತಿದ್ದಿಕೊಳ್ಳುತ್ತಿರುವನು. ಮಧ್ಯೆ ಮಧ್ಯೆ "ನೀರೇಜ ಗಂಧಿಯೆ ಮುಖ ನೀರೇಜ ವದನವಾ-ಮಾರಾ ತೋರು ಬೇಗನೆ" ಹಾಡು ಗುನುಗಿಕೊಳ್ಳುತ್ತಿರುವನು. ತೆರೆ ಮೇಲಕ್ಕೆ ಹೋಗುವುದು)

**ಶೇಷಗಿರಿರಾಯ**— ಎಷ್ಟಾದ್ರೂ ಪೂರ್ವದ ಪೈಕಟ್ಟು, ದೇಹಗುಣ ಎಲ್ಲಿ ಹೋಗುತ್ತೆ. ಮೀಸೆಗೆ ಬಣ್ಣ ಹಾಕ್ಕೊಂಡ ತಕ್ಷಣಾನೆ ಸಿಜ್ವಾದ ಕರೀಮೀಸೆ ತಲೆಮೇಲೆ ಹೊಡೆದಷ್ಟೇ ಪ್ರಾಯ ಬಂದ್ಬಿಡ್ತು. ಈ ಕಾಲ್ದಲ್ಲಿ ಏನಾಗೋದಿಲ್ಲ! ದೇವರು ಕೊಟ್ಟ ಹಲ್ಲು ಕೂಡ ಹೀಗಿರೋದಿಲ್ಲ! ಶಹಭಾಸ್! ಮದುವೇನ ಆಯ್ತು ಅನ್ನಿಸ್ಬಿಟ್ಟೆ—ಹೆಚ್ಚು ಕಲಾಪಗಳಿಗವಕಾಶಕೊಡ್ಲಿಲ್ಲ — ಹಾಸ್ಯಮಾಡಾರೂಂತ ಜನಾನೂ ಕರಿಸ್ಲಿಲ್ಲ—ಪ್ಲೇಗ್ನಿಂದ ಜನ ಊರುಬಿಟ್ಟು ಹೋದ್ದೇ ಅನುಕೂಲವಾಯ್ತು. ಜನದ ಗಲಾಟೆಯೆ ಇಲ್ಲ. ಹೆಂಡ್ತೀನ ಮನೆಗೆ ಕರ್ಕೊಂಡೇ ಬಂದ್ಬಿಟ್ಟೆ! ಎಂಥಾ ಮುದ್ದಾದ ಮುಖ, ಕಾಳಿದಾಸಾದಿ ಕವಿಗಳ್ವರ್ಣಿಸೋಹಾಗೆ ಏನು ತುಟಿ, ಏನು ಎಳೆನಗು, ಏನು ನಡೆ, ಏನು ಬೆಡಗು—ಆದ್ರೆ ನನ್ನೆರಳು ನೋಡಿದ್ರೇ ಓಟ ಹೋಡಿತಾಳೆ. ಪಾಪ, ನಾಚಿಕೆ! ಈ ಕಾಲ್ದಲ್ಲಿ ಇಂಥಾ ವಿದ್ಯಾವತಿಯಾದ ಹೆಂಡ್ತೀ ನನಗ್ಸಿಕ್ಬೇಕೂಂದ್ರೆ ನಾನೆಷ್ಟದೃಷ್ಟ ಮಾಡಿರ್ಬೇಕು. ಅವಳಿಗೆ ಸಿಟ್ಟು ಹೆಚ್ಚು—ಆದ್ರಿಂದ ಮನಸ್ಗೇನೋ ಭಯವೇ! ಇನ್ನೂ ಚಿಕ್ಕೋಳು—ಸ್ಫುರದ್ರೂಪಿ—ವಿದ್ಯಾವತಿ—ರಸಿಕಳು—ನಾನೋ ಶುದ್ಧ ಮುದಿಯ (ಯೋಚಿಸಿ) ಇರಲಿ, ಅವಳ ಮನಸ್ಸನ್ನ ಒಲಿಸ್ಕೊಂಡು ನನ್ನೇ ಪ್ರೀತಿಸೋಹಾಗೆ ಮಾಡೋಶಕ್ತಿ ನನ್ನಲ್ಲಿಲ್ವೆ? ಮೊದಲೊಂದ್ನಾಲ್ಕು ದಿನ ಕೊಂಚ ಹುಚ್ಚು ಹುಚ್ಚಾಗಿ ಆಡ್ತಾಳೊ ಏನೋ? ಆಡ್ಕೊಳ್ಳಿ ಪಾಪ! ಮೊದಲೇ ನಾನಷ್ಟು ಬಿರುಸಾಗಿರಬಾರ್ದು.

ಕೈಗೆ ಬಂದಿರೋ ತುತ್ತು ಬಾಯಿಗ್ಬರ್ದೇ ಹೋದೀತು. ಆಮೇಲಾ ಮೇಲೆ ತಾನೇ ಸರ್‍ಹ್ಯೋಗ್ತಾಳೆ. ಸಂಸಾರ ತಾಪತ್ರಯ ತಲೆ ಗಂಟ್ಕೊಂಡ್ರೆ ಎಂಥಾವರಾದ್ರೂ ಸರಿಹೋಗ್ತಾರೆ. ಇನ್ನು ಪಾಪ, ಇವಳೇನು ?–ಬಂಗ್ಲ ಕಷ್ಟಾನೆಲ್ಲಾ ನಿಭಾಯಿಸ್ಕೊಂಡು ಧೈರ್ಯವಾಗಿ ಮದ್ವೇ ಮಾಡ್ಸೇಬಿಟ್ನಲ್ಲಾ ಆ ಅವಧಾನಿ–ಅವನ ಧೈರ್ಯ ಎಷ್ಟು ಹೇಳಿದ್ರೂ ಸಾಲ್ದು. ನನ್ನ ಭಾಗಕ್ಕವನು ದೇವರೇ ಸರಿ (ಪಕ್ಕಕ್ಕೆ ತಿರುಗಿ ಬರುತ್ತಿರುವ ಹೆಂಡತಿಯನ್ನು ನೆಟ್ಟದೃಷ್ಟಿಯಿಂದ ನೋಡುತ್ತಾ) ಅಗೋ ಅಗೋ ನನ್ನ ಹಂಸಾ ಬರ್‍ತಾಯಿದೆ. ಆಹಾ, ಹಂಸವೇ ಸರಿ. ಅದೇನ್ನಡಕಾಟ, ಅದೇನಾವಯ್ಯಾರ. ಸ್ವರ್ಗ ದಲ್ಲಿರೋ ರಂಭೇನ ಮೀರಸ್ತಾಳೆ ನನ್ನ ಲಲಿತೆ ! ಇರಲಿ–ನಾನಿಲ್ಲೇ ಮರೇಲ್ನಿಂತಿದ್ದು ಅವಳಾಡ್ಕೊಳ್ಳೋ ಮಾತೆಲ್ಲಾ ಕೇಳ್ತೀನಿ.

(ನಿಷ್ಕ್ರಮ–ಆಧುನಿಕ ನಾಗರಿಕ ವನಿತಾ ವೇಷಧಾರಿಣಿ ಲಲಿತೆಯ ಪ್ರವೇಶ. ಕೈಯಲ್ಲೊಂದು ಪುಸ್ತಕ—ಒಂದು ಬೀಸಣಿಗೆ ಇದೆ)

**ಲಲಿತ**— (ಕುರ್ಚಿಯಮೇಲೆ ಕುಳಿತು ಬೀಸಿಕೊಳ್ಳುತ್ತಾ) ಏನು ಶಖೆ, ಅಬ್ಬಬ್ಬಾ ! ಈ ಹಾಳ್ಮನೇಲಿ ಒಂದು Fan ಕೂಡಾ ಇಲ್ಲ. ನಮ್ಮ Hostel ಎಷ್ಟೋ ಚೆನ್ನಾಗಿತ್ತು. ಅಲ್ಲಿ ಆಡ್ಕೊಂಡು, ಹಾಡ್ಕೊಂಡು, ಮನಸ್ಬಂದಾಗಷ್ಟು ಓದ್ಕೊಂಡು ಒಳ್ಳೇ Merry bird ಇದ್ದ ಹಾಗಿದ್ದೆ. ನನ್ಹಾಳು Brother ಈ matrimony ಗೆ ತಂದು ಸಿಕ್ಸಿ ನನ್ನ career ಎಲ್ಲ ಹಾಳ್ಮಾಡಿದ. ಅವನೊಬ್ಬ foresight ಇಲ್ದ ಶುದ್ಧ Fool. ಬಿಟ್ಟುಬಿಟ್ಟು ಹಲ್ಕಟ್ಟಿಸ್ಕೊಂಡಿರೋ ಈ ಮುದಿಗೂಬೆಗೇ ನನ್ನಕಟ್ಟಬೇಕೇ ? (ಕ್ಷಣಕಾಲ ಯೋಚಿಸಿ, ಅಳುವನ್ನಭಿನಯಿಸುತ್ತಾ) ಹಾಳು ಹೆಣ್ಣಾಗಿ ಹುಟ್ಬಾರದು. ನಮಗೆ Bondage ತಪ್ಪೋ ಹಾಗಿಲ್ಲ–aspire ಮಾಡೋ Liberty ಬರೋಹಾಗಿಲ್ಲ. ಹೆಣ್ಮಕ್ಳು ಹುಟ್ಟಿದ್ರೆ ತಾಯ್ತಂದೆಗಳು ಕುತ್ತಿಗೆ ಹಿಸುಕಿ ಭಾವೀಲಾದ್ರೂ ಹಾಕ್ಬಾರ್‍ದೇ. ಹೀಗೆ ಮುದಿಗೊಡ್ಡುಗಳಿಗೆ ಕೊಟ್ಟು ಮದ್ವೇಮಾಡಿ ನಮ್ಮ Life ನ ruin ಮಾಡೋಕಿಂತ—

**ಶೇಷಗಿರಿ**— (ಆತ್ಮಗತ) ಅಯ್ಯೋ ಪಾಪವೇ, ಸುಮ್ಮಸುಮ್ನೆ ಕಣ್ಣಲ್ನೀರು ತಂದ್ಕೋತಾಳಲ್ಲಾ-ಹಾಗೂ ಹೀಗೂ ನನ್ನ ಮುದಿಗೂಬೆ ಮಾಡ್ಬಿಟ್ಳು. ಪುರುವಾಯಿತೂಂತ ಕಾಣತ್ತೆ.

**ಲಲಿತ**— ಸರಿ, ಇನ್ಮೇಲೆ ದುಡಿ ಅಂತಾ ಹೇಳ್ತಾರೋ ಏನೋ? ಈ ಮುದಿ ಮಂಗಗಳಿಗೆ Love ಅಂದ್ರೇನು ಅದೇ ಗೊತ್ತಿಲ್ಲ. Western Education ಪಡದ್ಮೇಲೆ ಈ niggers ನ ಮದ್ವೇ ಮಾಡ್ಕೊಳ್ಳೋದು ಶುದ್ಧ disgraceful. England ಗೆ ಹೊರಟು ಹೋಗೋಣಾಂತ foreign scholarship ಗೆ try ಮಾಡ್ತಿದ್ದೆ. Competition ಹೆಚ್ಚಾಗಿ ಅದೂ ತಪ್ಪಿಹೋಯ್ತು. ಈ communal squabbles ನಲ್ಲಿ merit ಗೆ recognition ಸಿಕ್ಕತ್ಯೇ?

**ಶೇಷಗಿರಿ**— (ಆತ್ಮಗತ) ಅಬ್ಬಬ್ಬಾ, ಏನು ಅಭಿಪ್ರಾಯಗಳಿವು? ನಮ್ದೇಶ, ನಮ್ಮ ಜನಾಂದ್ರೆ ಇವಳ್ಗಿಷ್ಟು ಅಸಡ್ಡೆ. ಅದಕ್ಕೇ ಹೆಂಗ್ಸರಿಗೆ ಹಾಳು ವಿದ್ಯೆ ಹೇಳಸ್ಬಾರದು ಅನ್ನೋದು. Love ಅಂತೆ, Love-making ಅಂತೆ! Love ಮಾಡೋದೂಂದ್ರೆ ಹ್ಯಾಗೋ ಏನೋ? ನಂಗೆ ಅಷ್ಟೊಂದು English ಬರದು. ಇಲ್ದಿದ್ರೆ ಸ್ವಲ್ಪ ಓದ್ಕೊಂಡಾದ್ರೂ ತಿಳ್ಕೊಂಡಿರಬಹುದಾಗಿತ್ತು. ಹ್ಯಾಗಾದ್ರೂ ಅವಳ್ಮನಸ್ಸು ಇಂಗ್ಲೆಂಡು ಬಿಟ್ಟು ನನ್ನ ಕಡೆ ತಿರುಗಿದ್ರೆ ನಾನೇ ಧನ್ಯ! ಮಾತಾಡ್ಸಿ ನೋಡ್ತೀನಿ (ಪ್ರವೇಶಿಸುವನು. ಇದನ್ನು ಕಂಡ ಲಲಿತೆ ಪುಸ್ತಕವನ್ನೋದುವಂತೆ ನಟಿಸುವಳು. ಶೇಷಗಿರಿರಾಯ ಪ್ರೇಮದಿಂದ ಕಣ್ಣು ಮುಚ್ಚುವನು)

**ಲಲಿತ**— (ಕುಪಿತಳಾಗಿ) ಏನಿದು, mannerlessness! concentration ನ್ನಿಂದ Study ಮಾಡ್ತಾಯಿದ್ರೆ ಮಕ್ಕಳ ಹಾಗೆ ಕಣ್ಮುಚ್ಚೋದು! ಇದೇನು? ಕಣ್ಣಾಮುಚ್ಚಾಲೆ ಆಟ ಕೆಟ್ಟು ಹೋಯ್ತೇನು?

**ಶೇಷಗಿರಿ**— (ಆಶ್ಚರ್ಯಚಕಿತನಾಗಿ) Mannerlessnessoo-Study-

ಮಕ್ಕಳೂ-ಅಬ್ಬಾ-ಕ್ಷಮಿಸು ಪ್ರಿಯೆ ! ಗೊತ್ತಿಲ್ದೆ ಮಾಡಿದಪರಾಧಾನ ದೊಡ್ಡ ಮನಸ್ಮಾಡಿ.

**ಲಲಿತ**— Repeat ಮಾಡೋಕೇನಿದು Grammar School ಯೇನು ? ಮನೇನೇನು Dramatic stage ಮಾಡ್ತೀರೋ ಹ್ಯಾಗೆ ? 'ಪ್ರಿಯೇ, ನಾಯಕೀ, ಮಧುರ ವೇಣೀ, ಪನ್ನಗವಾಣೀ, ದೊಡ್ಡ ಮನಸ್ಮಾಡಿ ಮನ್ನಿಸೂಂತ' ಕೇಳೋಕೆ—ಪ್ರಿಯ ! ಪ್ರಿಯ ! ಮನ್ನಿಸಲಾಗುವುದಿಲ್ಲ.

**ಶೇಷಗಿರಿ**— ಕೋಪಮಾಡ್ಕೊಂಡ್ರೆ ಹ್ಯಾಗಾಗತ್ತೇ ? ಮದುವೆ ಯಾಗಿನ್ನೂ ಸರಿಯಾಗಿ ಮೂರು ದಿವ್ಸವಾಗಿಲ್ಲ ! ಸಾಲದ್ದಕ್ಕೆ ನಿನ್ನುದ್ದಕ್ಕೂ ಹಣಾಸುರ್ರಿದ್ದೀನಿ, ನೀನೆಷ್ಟಾದರೂ ನನ್ನ ಹೆಂಡತಿ-ನಾನೆಷ್ಟಾದರೂ ನಿನ್ನ ಗಂಡ-ಕೋಪಾಮಾಡ್ಕೊಂಡ್ರೆ ಏನು ಪ್ರಯೋಜ್ನ ಹೇಳು ?

**ಲಲಿತ**— ದುಡ್ಡು ಕೊಟ್ಟು ಕೊಂಡ್ಕೊಂಡಾಕ್ಷಣ ನಾನಿಮ್ಮ ಹೆಂಡತಿ ಯಾಗ್ಹೋಗ್ಬಿಟ್ನೋ ? ನನ್ನನ್ನೇ ನಾನು ಮಾರ್ಕೊಂಡ ಹಾಗಾಯ್ತೋ-Horrible ! ವಯಸ್ಸಾದ್ರೂ ನಿಮಗ್ಬುದ್ಧಿ ಯಾತಕ್ಬರಲಿಲ್ವೋ ? ನೋಡಿದ್ರೆ ನಮ್ಮಜ್ಜ ಇದ್ದಾಗಿದ್ದೀರಿ, ಹೆಂಡ್ತೀಂತ ಕರ್ಯೋಕೆ ನಾಚ್ಕೆಯಾಗೋದಿಲ್ವೇನೋ ? ಥೂ ನಿಮ್ಮ ಬಾಳೇ !

**ಶೇಷಗಿರಿ**— (ಚಕಿತನಾಗಿ ಆತ್ಮಗತ) ಒಳ್ಳೇ ಮಾರಿಯೇ ಗಂಟು ಬಿದ್ದಹಾಗಾಯ್ತೇ ! ಹೆಂಗಸರಿಗೆ ಇಷ್ಟೊಂದು ಸ್ವತಂತ್ರಕೊಡ್ಬಾರ್ದು. ಇರಲಿ, ಕೊಂಚ ಜಬರ್ದಸ್ತುಮಾಡಿ ಬೆದರಿಸ್ತೇನೆ. (ಪ್ರಕಾಶ) ಲೇ, ಏನಿದು ಆವೇಶ ! ಒಳ್ಳೇ ಮಾತ್ನಲ್ಲಿ ಹೇಳ್ತಾಯಿದ್ರೆ ಹಾಗೇ. ಬಹಳ ಕೊಬ್ಬಹೋಗಿದಿ ಹುಷಾರ್—

**ಲಲಿತ**— (ಕುಳಿತಿದ್ದ ಸ್ಥಳದಿಂದೆದ್ದು) ಲೇ, ಲೇ, ಅಬ್ಬಬ್ಬಾ ! Brutish!

ಮಾತಾಡ್ಸೋವಾಗ ಮರ್ಯಾದೆ ಕೊಂಚಾನೂಯಿಲ್ಲ. ಹೆಂಡ್ತೀ ಯಂದ್ರೇನು ನಿಮ್ಮನೆ ಕರೂ ಕಟ್ಹಾಕೋ ಗೂಟಾಂತ ತಿಳ್ಕೊಂಡ್ರೋ ಹ್ಯಾಗೆ? ಮಾತಾಡೋವಾಗ ವ್ಶೈಮೇಲೆ ಪ್ರಜ್ಞೆ ಯಿರ್ಲಿ. ಆಡಿದ್ಮಾತ್ನ withdraw ಮಾಡ್ಕೊಂಡು ಈಕ್ಷಣ apology ಕೇಳ್ಕೊಳ್ಳಿ

**ಶೇಷಗಿರಿ** — ಏನುಏನು! withdraw ಮಾಡ್ಕೊಂಡು apology ಕೇಳ್ಕೋಬೇಕೋ? ಅಸಾಧ್ಯ: (ಆತ್ಮಗತ) apology ಅಂದ್ರೇನೋ ಸರಿಹೋಯಿತು withdraw ಅಂದ್ರೇನು? ಹಾಳು ಇಂಗ್ಲಿಷ್ ಚೆನ್ನಾಗಿ ಬರ್ದೇಯಿರೋದು ಪ್ರಾಣಕ್ಕೇ ಒಂದಿದೆ

**ಲಲಿತ** — ಹಾಗಾದ್ರೆ ನಾನು ಹೊರಟೆ Good-Bye (ಎಂದು ಹೊರಡಲುದ್ಯುಕ್ತಳಾಗುವಳು)

**ಶೇಷಗಿರಿ**— (ಆತ್ಮಗತ) ಬಹಳ ಹಣಾಹುರ್ದ್ದ ಕೊಂಡ ಹೆಂಡ್ತಿಯಿದು. ಮೊದಲ್ಮೊದಲು ನಾನ್ಯೋಚ್ನೆ ಮಾಡ್ದಹಾಗೆ ಐಲ್‌ಫೇಲ್. ಆಮೇಲೆ ತಾನೇತಾನಾಗಿ ಸರಿಹೋಗ್ತಾಳೆ ಇನ್ನೂ ಬೆಂಗಳೂರು ಪಿತ್ಥ ಇಳಿದಿಲ್ಲ. ನಾನೇ ಸಡಲ ಬಿಡ್ತೀನ (ಪ್ರಕಾಶ) ನನ್ನ ಗೃಹಲಕ್ಷ್ಮೀ! ನಿನ್ನ ದಮ್ಮಯ್ಯ ಹೋಗಬೇಡ-apology ಮಾಡ್ಕೊಂಡಿದ್ದೇನೆ. Withdraw ಕೇಳ್ಕೊಂಡಿದ್ದೇನೆ – ಇನ್ನೂ ಏನು ಮಾಡ್ಲಿ ಹೇಳು

**ಲಲಿತ**—(ಆತ್ಮಗತ-ಪರಿಹಾಸಿತಳಾಗಿ) ಒಳ್ಳೇ Romantic Husband. ವೃದ್ಧಾಪ್ಯದಲ್ಲಿ ವಿವಾಹಿತರಾದೋರ ಪಾಡೆಲ್ಲಾ ಇಷ್ಟೇತಾನೆ. ಹೆಂಡ್ತಿ ಹೇಳಿದ್ಕೆಲಸ ಮಾಡ್ಕೊಂಡು, ಹಾಕಿದ ಹಿಟ್ಟು ತಿನ್ಕೊಂಡು, ಅವಳ ಮುದ್ದು ಮುಖ ನೋಡ್ಕೊಂಡು ಬಿದ್ದಿರೋದು. ಇವರ್ನ ಇಷ್ಟಕ್ಕೇ ಬಿಡಕೂಡದು (ಪ್ರಕಾಶ) ನೀವು ನನ್ನ ಮುಖ ಇನ್ನೊಂದುವಾರ ನೋಡಕೂಡದು. ನನ್ನ ರೂಮಿಗೆ ಬರಕೂಡದು. ನನ್ನ ಜೊತೆ ಮಾತಾಡ್ಕೂಡದು. ಇದೇನೂ

ಹೊಸ ವ್ರತವಲ್ಲ–ರಾಜಪೂತ ಹೆಂಗಸ್ರೆಲ್ಲಾ ಮಾಡ್ತಿದ್ರೂಂತ History ಹೇಳಿದೆ.

**ಶೇಷಗಿರಿ**— (ಆತ್ಮಗತ) ಇದೇನ್ಬಂತಪ್ಪಾ ಹೊಸ ಪ್ರಾಣಸಂಕಟ! ಇವಳನ್ನ ಮದುವೆಯಾದ್ದು ಈ ಸುಖಕ್ಕಾಗೀನೇ! ಹಾಳವಧಾನಿ ಮೋಸಮಾಡಿದ್ನೇ–ಈ ಚಂಡಾಲೀನ ಗೃಹಲಕ್ಷ್ಮೀ ಅಂತಾ ಅಂದು ನಾಲಗೆ ಅಪವಿತ್ರ ಮಾಡ್ಕೊಂಡ್ನಲ್ಲಾ–History ಅಂತೆ Geography ಯಂತೆ.

**ಲಲಿತ**— ಏನೊಬ್ಬರೇ ಗೊಣಗ್ಕೊತ್ತೀರಿ ಗಟ್ಟಿಯಾಗಿ ಮಾತಾಡೋ ಅಷ್ಟು ಧೈರ್ಯವಿಲ್ವೇನು? ನಿಮ್ಮಂಥಾ ಗಂಡ್ಸರ್ಗಿಂತಲೂ ನನ್ನಂಥಾ ಹೆಂಗಸ್ರೇ ಮೇಲು ಎಷ್ಟೋ Stright forward ಆಗಿರ್ತೀವಿ.

**ಶೇಷಗಿರಿ**— ಲೇ, ಎಲೇ, ಇದೇನು ನಿನ್ನಾರ್ಭಟ. ನೀನೇನು ಹೆಂಗಸೋ ರಾಕ್ಷಸಿಯೋ? ನಿನ್ನ condition ಕಂಡೀಷನ್ ನನ್ನ ಕೈಲಾಗೋದಿಲ್ಲ. ಹೀಗೆಲ್ಲಾ ಆಡಿದ್ರೆ ಮನೆಯಿಂದ ಕತ್ತುಹಿಡಿದು ನೂಕಸ್ತೀನಿ ನೋಡು. ಏನು! ಯಾರೂಂತ ತಿಳ್ಕೊಂಡೆ! ಪಾಪಾಂತ ಸುಮ್ನಿದ್ರೆ ಹೀಗೇ! ಛೀ! ಹೊಟ್ಟೆಗೆ ಹಿಟ್ಟಿಲ್ದೆ ಎಲ್ಲೋ ಬಿದ್ದಿದ್ದದ್ನ ಕರ್ಕೊಂಬಂದು ಮನೇಯಜಮಾನಿತಿ ಮಾಡಿದ್ದಕ್ಕೆ ಇದೇ ಉಪಕಾರ? ಮದ್ವೆಯಾಗೋವಾಗ ಎಷ್ಟು ದೈನ್ಯ–ಆ ನಿಮ್ಮಣ್ಣಾ ಅನಿಸ್ಕೊಂಡ ಆ ಪೋರ ನನ್ನ ಕಾಲು ಹಿಡ್ಕೊಂಡ್ನೇ–ಈಗ ಬಂತಲ್ವೆ ನಿನಗೆ ಪರಂಗಿಯೋರ ಪೊಗರು.

**ಲಲಿತ**— ಹಾಗೋ–ನೀವೂ ನಮ್ಮಣ್ಣಾನೂ ಸೇರಿ ನನಗ್ಮೋಸಾಮಾಡಿ, ನನ್ತಲೆಮೇಲೆ ಕಲ್ಲು ಎತ್ತಿಹಾಕೋ ಪ್ರಯತ್ನ ಮಾಡಿದೀರೋ–ತಡೀರಿ ತಕ್ಕದ್ಮಾಡಿಸ್ತೀನೆ. ನಂಗೇನು ಭಯ. ಊರೆಲ್ಲೆಲ್ಲಾ ರಂಪ ಎಬ್ಬಿಸಿ ನಿಮ್ಮುಖಕ್ಕೆ ಮೂರ್ಕಾಳು ಉಪ್ಪು ಹುಟ್ಟದ್ಹಾಗೆ ಮಾಡ್ದೇಯಿದ್ರೆ ನನ್ನ ಹೆಸರು ಲಲಿತಾ ಅಲ್ಲ. High court ವರೆಗೆ

ಹೋದ್ರೂಸರ್‍ಯೆ! ನೀವು ಮಾಡಿದ್ನೆನಸ್ಕೊಂಡು ಮನೆ ಮನೆಗೂ ಭಿಕ್ಷಾಪಾತ್ರೆ ತೊಗೊಂಡು ಹೋಗಬೇಕು. ಹಾಗ್ಮಾಡ್ದೇಯಿದ್ರೆ ನಮ್ಮಪ್ಪನ ಮಗಳೇ ನಾನು, ಲಲಿತಾಂದ್ರೇನು ಕೈಲಾಗದ village girl ಅಂತಾ ತಿಳ್ಕೊಂಡ್ರೋ? ನೋಡೋರಂತೆ ಹಟ-ನೀವ ಗೆಲ್ತೀರೋ ನಾನು ಗೆಲ್ತೀನೋ.

**ಶೇಷಗಿರಿ**— (ಆತ್ಮಗತ) ಅಯ್ಯೋ, ಒಳ್ಳೇ ಪ್ರಾಣಕ್ಕೇ ಬಂತಲ್ಲಾ. ಬೀದೀಲ್ಹೋಗೋ ಮಾರಮ್ಮನ್ನ ದುಡ್ಡು ಕೊಟ್ಟು ಕೊಂಡು ಮನೇಲಿಟ್ಟುಕೊಂಡಹಾಗಾಯ್ತಲ್ಲ! ಶೇಷಗಿರಿರಾಯನ ದರ್ಪ, ಊರ್‍ನಲ್ಲಿದ್ದ ಮರ್ಯಾದೆ, ನಂಟರಿಷ್ಟರಲ್ಲಿದ್ದ ಗೌರವ, ಎಲ್ಲಾ ಇವತ್ತಿಂದ ಭಸ್ಮವಾದ ಹಾಗೇ ಸರಿ. ಸದ್ಯಕ್ಕೆ ಊರಿಗೆ ಜನಾ ಬಂದಿಲ್ಲ. ಆದ್ರಿಂದ ಈ ಮಾತು ಯಾರಿಗೂ ಕೇಳಿಸ್ಲಿಲ್ಲ ಅಯ್ಯೋ! ಈ ಹಾಳು ಮದುವೆ ಯಾತಕ್ಕಾನೆ ಮಾಡ್ಕೊಂಡ್ನೋ? ದೇವರೇ. ಯಾಕಪ್ಪಾ ನನಗೀ ದುರ್ಬುದ್ಧಿ ಕೊಟ್ಟೆ? ಉಪಾಯ ಮಾಡ ಬೇಕು (ಪ್ರಕಾಶ) ಎಲೀ ಪುಣ್ಯಾತ್ಗಿತ್ತೀ-ಹಾಗನ್ನಾರದಷ್ಟೇ-Madam ಸಾಹೇಬರೇ, ನಿಮ್ಮ ದಮ್ಮಯ್ಯ. ದೊಡ್ಮನಸ್ಮಾಡಿ ನನ್ನ ಮಾನ ಕಾಪಾಡಿ. ಮರ್ಯಾದೆಯಾಗಿ ನಾನೀ ವೃದ್ಧಾಪ್ಯ ಕಳೆದು ಸಾಯೋಕೆ ಅನುಕೂಲ ಮಾಡಿಕೊಡಿ. ತಾವೇನ್ಹೇಳಿದ್ರೂ ಮಾಡ್ತೀನೆ, ಏನು ಕೇಳಿದರೂ ಕೊಡ್ತೀನೆ. ತಮಗೆ ದೇವರು ಒಳ್ಳೇ ಬುದ್ಧಿ ಉತ್ತರೋತ್ತರ ಕೊಟ್ರೆ ನನ್ನೊಂದಿಗೆ ಸುಖವಾಗಿ ಸಂಸಾರ ಮಾಡಿಕೊಂಡಿರಬಹುದು. ದೇವರು ಯಾವದಕ್ಕೂ ಕಡಿಮೆ ಮಾಡಿಲ್ಲ.

**ಲಲಿತ**— 'ತಾವೇನ್ಹೇಳಿದ್ರೂ ಮಾಡ್ತೀನೆ-ಏನು ಕೇಳಿದರೂ ಕೊಡ್ತೀನೆ' ಎಂದದ್ದು ನಿಜವೋ?

**ಶೇಷಗಿರಿ** – ನಿಜ-ನಂಗೆ ಸುಳ್ಳು ಹೇಳೋದು ಬರೋದಿಲ್ಲ.

**ಲಲಿತ**— ಹರಿಶ್ಚಂದ್ರನ ಹಾಗೆ ಸತ್ಯಾನೇ ಹೇಳಿ, ಸುಳ್ಳು ಜಾತಕ ನಿರ್ಮಾಣಮಾಡಿಸಿ ನನ್ನ ಮದುವೆಯಾದರೇನೋ?

**ಶೇಷಗಿರಿ**— ಆದ್ದು ಕಂಟ್ರೊಂಡೇನು ಮಾತು. ನಿಂಗೇನು ಆಗ್ಬೇಕು ಹೇಳು.

**ಲಲಿತ**— ಈ ಮನೇನೆಲ್ಲಾ remodel ಮಾಡಿ, ಸುಣ್ಣ ಬಣ್ಣ ಮಾಡಿಸ್ಬೇಕು

**ಶೇಷಗಿರಿ**— ಆಗಬಹುದು

**ಲಲಿತ** – ಮನೇನ furnish ಮಾಡಿಸ್ಬೇಕು.

**ಶೇಷಗಿರಿ** — Punish ಮಾಡಿಸೋಣ

**ಲಲಿತ**— Punish ಅಲ್ಲ–furnish.

**ಶೇಷಗಿರಿ**— ಅದೇ–ಅದೇ ಮಾಡಿಸೋಣ.

**ಲಲಿತ**— ಇನ್ನೊಂದು ವಿಷಯ–ನನಗೆ ಸರಿಯಾಗಿ ಸೀರೆಕುಪ್ಪಸ ಇಲ್ಲ. ನಾಲ್ಕು ಜಾರ್ಜೆಟ್ ಸೀರೆ, ಎಂಟು ಸಿಲ್ಕ್‌ಪೀಸು ಬೇಕು.

**ಶೇಷಗಿರಿ**— (ಉಗುಳು ನುಂಗುತ್ತಾ) ನಾಲ್ಕುಸೀರೆ, ಎಂಟು ಸಿಲ್ಕೇ.... (ನಿಧಾನವಾಗಿ) ಆಗಲಿ.

**ಲಲಿತ**— ಯಾಕೆ ಅನುಮಾನಿಸ್ತೀರಿ–ಇಷ್ಟವಿಲ್ಲದಿದ್ರೆ ಹೇಳಿಬಿಡಿ.

**ಶೇಷಗಿರಿ**— ಛೆ! ಛೆ! ಇಷ್ಟವಿಲ್ದೆ ಏನು? ಒಟ್ಟಿಗೆ ತೂಗೊಂಡರೆ ಹುಳು ಹುಪ್ಪಟ ಹೊಡೆಯುತ್ತೇನೋ ಎಂದು ಯೋಚಿಸ್ತಿದ್ದೆ.

**ಲಲಿತ**— ನಾನು ನೋಡಿಕೊಳ್ತೀನಿ. D. D. T. powder ಸಿಕ್ಕುತ್ತೆ. ಹಾಗೇ ನಂಗೆ ಮುಖಕ್ಕೆ ಪೌಡರು, ಲಿಪ್‌ಸ್ಟಿಕ್ಕು, ಸ್ನೋ ಬೇಕು.

**ಶೇಷಗಿರಿ**— D. D. T. powder ತರೋಣ–ಹಾಗೇ ಸ್ನೋನೂ !

**ಲಲಿತ**— ಅಯ್ಯೋ-ನಿಮ್ಮನ್ನು ಕಟ್ಕೊಂಡು ನಾನೇನು ಮಾಡ್ಲಿ- D. D. T. ಹುಳು ಸಾಯಿಸೋ ಪೌಡರು.

**ಶೇಷಗಿರಿ**— ಮುಖ ಬೆಳಗಿಸೋ ಪೌಡರ್ ಬೇರೆ ಇದೆಯೋ ?

**ಲಲಿತ**— ಇದೆ-ಅದರ ಹೆಸರು Evening in Paris.

**ಶೇಷಗಿರಿ**— ಆಗಬಹುದು. ಅಷ್ಟೇತಾನೆ.

**ಲಲಿತ**— ಅಷ್ಟೇಅಲ್ಲ–ನಂಗೆ ತಿಂಗಳಿಗೆ pocket money ಇನ್ನೂರು ರೂಪಾಯಿ ಕೊಡಬೇಕು–ನನ್ನ ಮೇಲುಖರ್ಚಿಗೆ

**ಶೇಷಗಿರಿ**— ನಾನೇ ಇದ್ದೀನಲ್ಲಾ. ನೀನು ಏನು ಕೇಳಿದರೂ ತಂದು ಕೊಡುತ್ತೇನೆ.

**ಲಲಿತ**.— ತೆಗೆದರಲ್ಲಾ ನಿಮ್ಮ meanness ಮತ್ತೆ.

**ಶೇಷಗಿರಿ**— ಮೀನುನೇಸು ಅಂದರೇನೇ ?

**ಲಲಿತ**— ಅದು ಇಂಗ್ಲಿಷ್ ಶಬ್ದ–ಲೋಭಾಂತ ಅರ್ಥ.

**ಶೇಷಗಿರಿ**— ಅದೂ ಆಗಬಹುದು. ಮುಗೀತು ತಾನೆ.

**ಲಲಿತ**— ಇಲ್ಲ. ನಮ್ಮಣ್ಣ ರಾಜೂ–Higher Studiesಗೆ ಇಂಗ್ಲೆಂಡಿಗೆ ಹೋಗಬೇಕೂಂತಿದ್ದಾನೆ–ಅವನಿಗೆ ಹತ್ತುಸಾವಿರ ಕೊಡಬೇಕು– ನಿಮಗೆ ಹತ್ತು ಸಾವಿರಾಂದ್ರೆ ಏನೂ ದೊಡ್ಡ ವಿಷಯವಲ್ಲ.

**ಶೇಷಗಿರಿ**— ನನ್ನ ತೋಟದಲ್ಲಿ ಬರೀ ರೂಪಾಯಿ ಬೆಳೀತೀನಿಂತ ತಿಳ್ಕೊಂಡಿದ್ದೀಯೇನು ? ಅಷ್ಟು ದುಡ್ಡು ನಾನೆಲ್ಲಿಂದ ತರಲಿ ?

**ಲಲಿತ**— ಅದು ನಂಗೇನುಗೊತ್ತು. ಆ ಹಳೇ ಟ್ರಂಕಿನಲ್ಲಿ ಕೊಳಕಲು ನೋಟು ಮುಚ್ಚಿಟ್ಟದ್ದೀರಲ್ಲಾ ಅದನ್ನ ಹೊರಕ್ಕೆ ತೆಗೀರಿ.

**ಶೇಷಗಿರಿ**— ಅದು ಯೋಚನೆ ಮಾಡೋವಿಷಯ. ತಟಕ್ಕನೆ ಜವಾಬು ಕೊಡೋದಿಕ್ಕಾಗೋದಿಲ್ಲ.

**ಲಲಿತ**— ನಾಳೆ ತನಕಾ ಟೈಮ್ ಕೊಟ್ಟದ್ದೇನೆ. ಆಗಲ್ಲ ಅಂತಾ ನೀವಂದರೆ ನಾನು ನಾಳೆಯೇ ಬೆಂಗಳೂರಿಗೆ ಹೊರಟೆ.

**ಶೇಷಗಿರಿ**— ನೀನೇನು ಹೆಣ್ಣೋ ಹೆಮ್ಮಾರಿಯೋ ?

**ಲಲಿತ**— You brute-how dare you talk like that.

[ಕೋಪದಿಂದ ನಿಷ್ಕ್ರಮಿಸುವಳು]

**ಶೇಷಗಿರಿ**— (ಕುರ್ಚಿಯಮೇಲೆ ಕುಕ್ಕರಿಸಿ, ತಲೆಯಮೇಲೆ ಕೈಹೊತ್ತು) ಅಯ್ಯೋ ಭಗವಂತಾ-ಏನು ಗ್ರಹಚಾರ ತಂದೆಯಪ್ಪಾ (ಎನ್ನುವನು)

(ತೆರೆ ಬೀಳುವುದು)

---

## ದೃಶ್ಯ ೧೧.

[ಅದೇ ಊರಿನ ಒಂದು ಬೀದಿ. ಕಿಟ್ಟಿ, ರಾಜು, ಗಂಗಾಧರ ಮಾತನಾಡಿಕೊಂಡು ಹೋಗುತ್ತಿರುವರು]

**ಗಂಗಾಧರ**— ಕಿಟ್ಟೀ, ಈ ನಾಟಕದ ಭರತವಾಕ್ಯ ಯಾವಾಗಯ್ಯಾ ?

**ಕಿಟ್ಟಿ** — ನಾಟಕದ ಬೀಜ, ಬಿಂದು ಆಯ್ತು–ಈಗ ಪತಾಕೆಗೆ ಬಂದಿದೆ. –ಯಾಕೆ, ದೊಡ್ಡಪ್ಪನ ಮೇಲೆ ಬಹಳ ಕನಿಕರ ಹುಟ್ಟಿದ ಹಾಗೆ ಕಾಣತ್ತಲ್ಲಾ.

**ಗಂಗಾಧರ**— ಅವರು ಪಡತಿರೋ ಕಷ್ಟ ನೋಡಲಾರೆ ಕಿಟ್ಟಿ–ರಾಜೂ, ಮಾಧೂ ಅವರನ್ನು ಹಣ್ಣು ಮಾಡಿಬಿಟ್ಟಿದ್ದಾರೆ.

**ಕಿಟ್ಟಿ**— ಏನಾಯಿತು recent developments ?

**ರಾಜು** – (ನಗುತ್ತಾ) Dear sister ಇನ್ನೂರು ರೂಪಾಯಿ Pocket money-ಸೀರೆ ಕುಪ್ಪಸ ಕೇಳಿದಳು–ರಾಯರು O. K. ಎಂದರು. ಆಮೇಲೆ ನನ್ನ ಇಂಗ್ಲೆಂಡಿಗೆ ಕಳಿಸೋಕೆ ೧೦,೦೦೦ ರೂಪಾಯಿ ಕೇಳಿದಳು. ಮೊದಲು ರಾಯರು ಸಿಡಗುಟ್ಟಿದರಂತೆ-ಆಮೇಲೆ ತಾವೇ ಬಂದು ಶರಣಾಗತರಾಗಿ ಆಗಲಿ ಎಂದು ಒಪ್ಪಿಕೊಂಡರಂತೆ.

**ಗಂಗಾಧರ**— ಸಾಕು ಮಾಡರಯ್ಯಾ. ಈ ಚಿತ್ರಹಿಂಸೆ ನಾನು ನೋಡಲಾರೆ.

**ಕಿಟ್ಟಿ**— ನೋಡಿದೆಯೇನೋ ರಾಜೂ–ತನ್ನ ಆಸ್ತಿ ಎಲ್ಲಿ ಕರಗತ್ತೋ ಎಂತಾ ಗಂಗಾಧರ ಎಷ್ಟು ಯೋಚನೆಮಾಡ್ತಾ ಇದ್ದಾನೆ.

**ಗಂಗಾಧರ**— ಅದಕ್ಕಲ್ಲ ಕಿಟ್ಟಿ. ಸತ್ಯವಾಗಿ ದುಡ್ಡಿಗಲ್ಲ. ಈ ಚಿಂತೇಲಿ ನನ್ನ Uncle ಗೆ ಏನಾದರೂ ಆದರೇನು ಗತಿ ಎಂದು ಯೋಚಿಸ್ತಿದ್ದೆ.

**ರಾಜು**— ಕಿಟ್ಟೀ, He is right. ಶೇಷಗಿರಿರಾಯರ endurance ಇನ್ನು ಬಹಳ ದಿವಸ ಉಳಿಯೋ ಹಾಗೆ ಕಾಣಲಿಲ್ಲ-ಮಾಧು ಬೇರೆ ಬಡಕೋತಾ ಇದ್ದಾನೆ.

**ಕಿಟ್ಟಿ** – ಈಗ uncle ಏನು ಹೇಳ್ತಾರೆ. ಹೆಂಡತಿ ಚಪಲ ಇನ್ನೂ ಇದೆಯೋ-ಬಿಡುಗಡೆ ಆದರೆ ಸಾಕೂಂತಿದ್ದಾರೋ ?

**ರಾಜು**— ಚಪಲಹೋಗಿಲ್ಲ-ಆದರೆ ಬಿಡುಗಡೆ ಬೇಕೂಂತಾಲೂ ಇರೋ ಹಾಗಿದೆ.

**ಕಿಟ್ಟಿ**— Madhu must work up the breaking point. ಹಾಳಾಗಿ ಹೋಗೂಂತ ಶೇಷಗಿರಿರಾಯರ ಕೈಯಲ್ಲಿ ಅನ್ನಿಸ್ಕೊಂಡ್ರೆ ಕಂಬಿಕೀಳೋಕೆ ಅನುಕೂಲವಾಗತ್ತೆ.

**ರಾಜು**— ಅದನ್ನು ಇವತ್ತೇ ಮಾಧು work up ಮಾಡ್ತಾನೆ.

**ಕಿಟ್ಟಿ**— (ಹೊರಡಲನುವಾಗಿ-ಎದುರಿಗೆ ನೋಡಿ) ಅದು ಯಾರೋ ಗಂಗೂ-ನಿಮ್ಮ uncle private secretary ಅವಧಾನಿ ಅಲ್ಲ ವೇನೋ ?

**ಗಂಗಾಧರ**— (ನೋಡಿ) ಹೌದು-ಹೌದು ಅವನೇ-ನಮ್ಮನೇ ಕಡೇನೇ ಹೊರಟಿರೋ ಹಾಗಿದೆ

**ಕಿಟ್ಟಿ**— ರಾಜು, ನೀನು Vanish ಆಗು-ಅವಧಾನೀನ ಸ್ವಲ್ಪ ವಿಚಾರಿಸಿ ಕೊಳ್ಳಬೇಕಾಗಿದೆ-ಜೇಬಲ್ಲಿ ಸಿಗರೇಟ್ ಪ್ಯಾಕು, ಬೆಂಕಿಪೊಟ್ಣ ಇದ್ದರೆ ಕೊಡು

[ರಾಜು ಸಿಗರೇಟ್, ಬೆಂಕಿಪೊಟ್ಟಣ ಕೊಟ್ಟು ನಿಷ್ಕ್ರಮಿಸುವನು]

**ಕಿಟ್ಟಿ**— [ಸಿಗರೇಟ್ ಹಚ್ಚಿಕೊಂಡು ಸೇದುತ್ತಾ ಗಂಗಾಧರನಿಗೆ] ನೋಡಪ್ಪಾ ಗಂಗೂ, ವೈದಿಕರಲ್ಲಿ ದುರಾಶೆ ಹೆಚ್ಚೋಹೊತ್ಗೆ ಲೋಕ ಹಾಳಾ

ದದ್ದು–ಅರೀದ ಹುಡುಗೀರ್ನ ತೊಗೊಂಡು ಹೋಗಿ ಮುದುಕರಿಗೆ ಗಂಟುಹಾಕಿ ಈ blood suckers ಬಾಳ್ತಾ ಇದ್ದಾರೆ. ಬಾಯಲ್ಲಿ ಆಚಾರ–ಧರ್ಮ ; ನಡತೆ ಬರೀ ಅನಾಚಾರ–ಅಧರ್ಮ.

[ಅವಧಾನಿ ಬರುವನು. ಅವನ ಕಿವಿಯಮೇಲೆ ಕಿಟ್ಟಿಯ ಮಾತು ಬಿದ್ದಿದೆ. ಅವನನ್ನು ತೋರಗೊಡನೆ]

**ಅವಧಾನಿ**— ಯಾರು ?

**ಕಿಟ್ಟಿ**— ಯಾಕೆ ಅವಧಾನಿಗಳೇ ಕಣ್ಣು ಚೆನ್ನಾಗಿ ಕಾಣಲ್ಲವೇ ?

**ಅವಧಾನಿ**— ಕೃಷ್ಣಸ್ವಾಮಿಾನೇ–ಇದು ಯಾರು ?

**ಕಿಟ್ಟಿ**— ಗಂಗಾಧರ–ಕಣ್ಣು ಕಾಣದೆ ಇದ್ದರೂ ನಿಮ್ಮ ಕಿವಿ ಬಹಳ ಚುರುಕು ಅವಧಾನಿಗಳೇ.

**ಅವಧಾನಿ**— ಏನು ಚುರಕೋ ಬಿಡಪ್ಪಾ. ವಯಸ್ಸಾದ ಮೇಲೆ ಬದುಕಿ ಕಂಡವರ ಕೈಗೆ ಬೀಳಬಾರದು.

**ಕಿಟ್ಟಿ**— ಇದೇನು ಹೀಗಂತೀರಿ ಅವಧಾನಿಗಳೇ–ಚಿಕ್ಕಪುಟ್ಟ ಸಂಸಾರ. ಮನೇಲಿ ಮುಚ್ಚಟೆ ಹೆಂಡತಿ–ಸಾಕ್ಷಾತ್ ಅಭಿಮನ್ಯುವಂಥ ಮಗ.

**ಅವಧಾನಿ**— ನಿಜ–ಏನಿದ್ದರೇನಪ್ಪಾ ಸಾರ್ಥಕ ವಿದ್ವಾಂಸರಿಗೆ ಬಡತನ ಇರಬಾರದು.

**ಕಿಟ್ಟಿ**— ಯಾರಿಗೆ ? ನಿಮಗೇ ! ನಿಮಗೆಂಥ ಬಡತನ ಅವಧಾನಿಗಳೇ. ಶೇಷಗಿರಿರಾಯರ ಮದುವೇಲೆ ಒಂದೆರಡು ಸಾವಿರ ಗಿಟ್ಟಿಸಿದಿರಿ– ಎಷ್ಟೋ ಕೊಟ್ಟರೋ ಗಂಗೂ ನಿಮ್ಮ uncle ಉ ?

**ಗಂಗಾಧರ**— ನನಗೆ ಗೊತ್ತಿಲ್ಲಪ್ಪಾ. ಅದೆಲ್ಲಾ ಅವಧಾನಿಗಳು, ದೊಡ್ಡಪ್ಪನಿಗೆ ಸಂಬಂಧಪಟ್ಟ ವಿಷಯ.

[ಕಿಟ್ಟಿ ಸೇದುತ್ತಿದ್ದ ಸಿಗರೇಟಿನ ಹೊಗೆ ಅವಧಾನಿ ಮುಖವನ್ನಾವರಿಸುವುದು. ಅವಧಾನಿ ಅಸಹ್ಯಪಟ್ಟುಕೊಂಡು]

**ಅವಧಾನಿ**— ಏನಯ್ಯ ಇದು ಅಸಹ್ಯ? ಹೊಲಸು-

**ಕಿಟ್ಟಿ**— ಅಗ್ನಿಹೋತ್ರ ಅವಧಾನಿಗಳೇ. ನೂತನ ಬ್ರಾಹ್ಮಣಿಕೆಯ ನವನೂತನ ಸಂಶೋಧನೆ-ಪ್ರಯೋಗ.

**ಅವಧಾನಿ**— (ಮುನಿಸಿನಿಂದ) ನೀನು ಬಹಳ ತಲೆಹೋಕ ಕಣಯ್ಯಾ.

**ಕಿಟ್ಟಿ**— ತಲೆಹೋಕ ನಿಜ - ತಲೆಹೊಡೆಕನಲ್ಲ - ಸಿಗರೇಟಿಗೆ ಬೆಂಕಿ ಹಚ್ತೀನಿ ನಿಜ-ಆದರೆ ಕಂಡವರ ಮನೆಗೆ ಬೆಂಕಿ ಹಾಕಲ್ಲ.

**ಅವಧಾನಿ**— ಯಾರಿಗೋ ಈ ಅನ್ವಯ.

**ಕಿಟ್ಟಿ**— ಯಾರಿಗೆ ಅನ್ವಯಿಸಿದರೆ ಅವರಿಗೇ !

**ಅವಧಾನಿ**—ದೊಡ್ಡವರ ಹತ್ತಿರ ಹೀಗೆ ಮಾತಾಡಬಾರದಯ್ಯಾ-ಶ್ರೇಯಸ್ಸಲ್ಲ—ಕೊಂಬು ಮೊಳೆಯೋಕೆ ಮುಂಚೇನೇ ಹಾಯೋಕೆ ಹೋಗಬಾರದು. ಹೋಗಲಿ ಹುಡುಗಾಂತ ನಾನೂ ಸಹಿಸಿ ಕೊಂಡೆ-ನನ್ನ ಸಹನೆಗೂ ಮಿತಿಯಿದೆ. ನನ್ನದೂ ಉಪ್ಪು ಹುಳಿ ಖಾರ ತಿನ್ನೋ ಶರೀರ.

**ಕಿಟ್ಟಿ**— ನಿಮ್ಮದು ಮಣ್ಣು ತಿನ್ನೋ ಶರೀರ-ನಿಮ್ಮದು ಕಾಸಿನಾಸೆಗೆ ಕೈಲಾಸನೂ ಅಡವಿಡೋ ಧರ್ಮ-ನಿಮ್ಮದು ಕಂಡವರ ಮನೆ ಹಾಳುಮಾಡಿ ಸ್ವಂತ ಮನೆ ಮೇಲೆ ಕಳಶ ಇಡೋ ಮತ....

**ಅವಧಾನಿ**— ಸಾಕು-ಸಾಕು ಮುಚ್ಚಯ್ಯಾ ಬಾಯಿ

**ಕಿಟ್ಟಿ**— ಏನ್ರಿ ಬಾಯಿ ಮುಚ್ಚೋದು ! ಯಾರಿಗಿರೀ ಹೇಳ್ತೀರಿ....

**ಅವಧಾನಿ**— ಅಯ್ಯೋ ! ಒಳ್ಳೇ ಹೀನ ಸಹವಾಸವಾಯಿತಲಾ.

ಅಯ್ಯೋ ಗಂಗಾಧರ–ಇದೆಲ್ಲಾ ನೋಡಿಕೊಂಡು ಸುಮ್ಮನೆ ನಿಂತಿರು ವೆಯಲ್ಲಯ್ಯಾ–ನಿನ್ನ ಸ್ನೇಹಿತನಿಗೆ ಸ್ವಲ್ಪ ವಿವೇಕ ಹೇಳಬಾರದೇ ?

**ಕಿಟ್ಟಿ**— ಶೇಷಗಿರಿರಾಯರಿಗೆ ಸುಳ್ಳು ಜಾತಕ ಬರೆದುಕೊಟ್ಟು ಮದುವೆ ಮಾಡಿಸ್ತಲ್ಲಾ ಮಂಗ–ಅದಕ್ಕೆ ವಿವೇಕ ಹೇಳಿ.

**ಅವಧಾನಿ**— ಬೇಡ - ಬೇಡ - ನನ್ನ ಸುದ್ದೀಗೆ ಬರಬೇಡ - ನಿನ್ನ ಗ್ರಹಚಾರ ನೆಟ್ಟಗಾಗಲ್ಲ.

**ಕಿಟ್ಟಿ**— ಶೇಷಗಿರಿರಾಯರ ಹೆಂಡತಿ ಬೆಂಗಳೂರಿಗೆ ಹೊರಟಿದ್ದಾಳೆ. ಗಂಡ ಹೆಂಡತೀಗೆ ಮಾರಾಮಾರಿಯಂತೆ–ಆ ಗ್ರಹಚಾರ ಬಿಡಿಸು ಹೋಗಿ.

**ಅವಧಾನಿ**— (ಚಿಕ್ಕಸಬೆರಗಾಗಿ) ಅಯ್ಯೋ ರಾಮ–ಇದೇನು ಬಂತಪ್ಪಾ ಹೊಸ ಗಂಡಾಂತರ.

[ಎಂದು ದುಗುಡದಿಂದ ಹೋಗುವನು]

**ಗಂಗಾಧರ**— ಏನು ಮಾಡಿಬಿಟ್ಟೆ ಕಿಟ್ಟೀ–ಅವನು ಹೋಗಿ uncle ಗೆ ಎಲ್ಲಾ Report ಮಾಡ್ತಾನೆ.

**ಕಿಟ್ಟಿ**— ಗಂಗೂ–ಅವನು ರಿಪೋರ್ಟ್ ಮಾಡಲೀಂತಾಲೆ ನಾನು ಕೀಟಳೆ ವ್ಯಾಜ್ಯ ತೆಗೆದದ್ದು.

**ಗಂಗಾಧರ**— ನಿನ್ನ ಜತೆ ನಾನೂ ಇದ್ದೆ ಎಂತಾ ಗೊತ್ತಾದರೆ.

**ಕಿಟ್ಟಿ**— ತುಂಬ ಒಳ್ಳೆಯದಾಯಿತು. Problem ಬೇಗ Solve ಆಗತ್ತೆ–ಬಾ ಮಗೂ ಬೆದರಬೇಡ–Trust in God and Kitty

(ಎಂದು ಗಂಗಾಧರನನ್ನು ಎಳೆದುಕೊಂಡು ಹೋಗುವನು)

---

*

*

## ದೃಶ್ಯ ೧೨

[ಶೇಷಗಿರಿರಾಯನ ಕೋಣೆ. ಚಿಂತಾಕ್ರಾಂತನಾಗಿ ತಲೆಯಮೇಲೆ ಕೈಹೊತ್ತು ಕುಳಿತಿದ್ದಾನೆ. ಕಣ್ಣಲ್ಲಿ ನೀರು ತುಂಬುತ್ತಿದೆ.]

**ಶೇಷಗಿರಿ—** ಅಯ್ಯೋ ನನ್ನ ಬಾಳು ಹೀಗೆ ಬಣ್ಣಗೇಡಾಗಬೇಕೇ? ಎಂಥ ಅವಿವೇಕಕ್ಕೆ ಕೈಹಾಕಿದೆ. ತಿರುಳಿಲ್ಲ ಸುಳ್ಳು ಸಮಾಚಾರ ಕೂಡ ಹರಡೋ ಈ ಹಳ್ಳಿಯಲ್ಲಿ ನನ್ನ ಬಾಳು ಹೀಗೆ ನಗೆಪಾಟ್ಲಾಯಿತಲ್ಲಾ! ದೇವರೇ, ನನಗ್ಯಾಕಪ್ಪಾ ಇಂಥಾ ದುರ್ಬುದ್ಧಿ ಕೊಟ್ಟೆ? ಇದ್ದದ್ದಾಯ್ತು–ಬಾಳಿದ್ದಾಯ್ತು–ಬದುಕಿದ್ದಾಯ್ತು ನೋಡಬಾರದ ಕಷ್ಟಗಳನ್ನೆಲ್ಲಾ ನೋಡಿದ್ದೂ ಅನುಭವಿಸಿದ್ದೂ ಆಯ್ತು–ಇಷ್ಟಾದ್ರೂ ನನಗ್ಬುದ್ಧಿ ಬರದೇ ಹೋಯ್ತಲ್ಲಾ—ಸಂಸ್ಕಾರವಿಲ್ದ ಈ ಹಾಳು ಜನ್ಮ ಇಟ್ಕೊಂಡು ಬದುಕಿರೋದಕ್ಕಿಂತ ಕೆರೆಗೋ ಭಾವಿಗೋ ಬಿದ್ದು ಪ್ರಾಣಬಿಡೋದು ಲೇಸು. ಚೋಟುದ್ದ ಹುಡುಗಿ ಕೈಲಿ ಎಷ್ಟು ಮಾತಾದ್ರೂ ಕೇಳಬೇಕಾಗಿದೆ ನನ್ನ ಕಷ್ಟ ದೇವರಿಗೇ ಪ್ರೀತಿ! ಗುಡಿಸಲ್ಗಳಿಂದ ಜನಾ ಬೇರೆ ಊರಿಗೆ ಬರ್ತ್ತಾಯಿವೆ–ಇವಳ ಆರ್ಭಟ ಹೆಚ್ತಾಯಿದೆ–ನನ್ನ ಬಾಳು ಕಾಸಿಕ್ಕಡೆ–ಎಲ್ಲಾರ್ಗೂ ತಿಳ್ದು ಹೋದ ಮೇಲೆ ನಾನು ಬದುಕಿದ್ದೂ ವ್ಯರ್ಥ (ಪಕ್ಕಕ್ಕೆ ತಿರುಗಿ ಗಂಗಾಧರ ಬರುತ್ತಿರುವುದನ್ನು ಕಂಡು) ಬಾರಪ್ಪಾ. ಗಂಗೂ--ಬಾರೋ ಅಣ್ಣಾ- ಇಲ್ಲಿ ಕುಳಿತ್ಕೋಬಾಪ್ಪಾ.

**ಗಂಗಾಧರ—** (ಆತ್ಮಗತ) ಏನೋ ಬಹಳ ಯೋಚ್ನೆಮಾಡ್ತಾ ದೊಡ್ಡಪ್ಪ ನೊಂದ್ಕೊಂಡಿರೋ ಹಾಗಿದೆ. (ಪ್ರಕಾಶ) ಯಾಕೆ ಹೀಗಿದ್ದೀ ದೊಡ್ಡಪ್ಪ–ಮೈಲಿ ಸರಿ ಇಲ್ವೇ–ಡಾಕ್ಟರ್ನ ಕರ್ಕೊಂಬರ್ಲೇ?

**ಶೇಷಗಿರಿ—** ಏನೂ ಇಲ್ಲ ಮಗೂ, ಹುಷಾರಾಗಿಯೇ ಇದ್ದೇನೆ. ಡಾಕ್ಟರೇಕೆ?

**ಗಂಗಾಧರ—** ನಿಜ, ನಿಜ. ರತ್ನದಂಥಾ ಹೆಂಡತಿ–ವಿದ್ಯಾವತಿ–ರಸಿಕಳು ಬೇರೆ. ಇನ್ನೇನ್ಕೊರತೆ.

**ಶೇಷಗಿರಿ**— ಸುಮ್ನೇಯಿರು ಗಂಗೂ-ಆ ಹಾಳು ಸುದ್ದಿ ಎತ್ಬೇಡ- ನನಗೆ ಮೈ ಕಿಡಿಕಿಡಿಯಾಗತ್ತೆ.

**ಗಂಗಾಧರ**— ಇದೇನು ದೊಡ್ಡಪ್ಪಾ? ಆಗಲೇ ಹೊಸದೊಡ್ಡಮ್ಮನ ಹತ್ರ ವ್ಯಾಜ್ಯ ಕಾದುಬಿಟ್ಟದ್ದೀ. ನೀನೇನಪ್ಪಾ ಯಾರ್ನ್ನೂ ಉಳ ಬಾಳೀಸಲ್ಲ.

**ಶೇಷಗಿರಿ**— ಗಂಗೂ, ನಿನ್ನ ದಮ್ಮಯ್ಯ ಆ ಹಾಳ್ಸುದ್ದಿ ಎತ್ಬೇಡ. ಆ ಮೃಗಾನ ದೊಡ್ಡಮ್ಮಾಂದ್ರೆ ನಿನಗೆ ಮಹಾಪಾಪ ಬರತ್ತೆ. ನಿಮ್ಮ ದೊಡ್ಡಮ್ಮ, ಅವಳ ಗುಣ, ಅವಳ ವಿನಯ, ಅವಳ ಭಕ್ತಿ, ಈ ಶಾಡ್ಬೈಕ್ಕಿನ ಕನಸ್ನಲ್ಲೂ ಬರೋಹಾಗಿಲ್ಲ. ಗಂಗೂ, ನಿನ್ನಲ್ಲಿ ನಿಜ ಹೇಳ್ತೀನೆ ಕೇಳು-ನಾನು ಮದ್ವೇ ಮಾಡ್ಕೊಂಡದ್ದು ಶುದ್ಧ ಹುಚ್ಚು ಕೆಲಸ.

**ಗಂಗಾಧರ**— ನಿನ್ನದು ಬಲು ಅವಸರದ ಪ್ರಕೃತಿ ದೊಡ್ಡಪ್ಪ. ಅವಸರ ಬಿದ್ದು ಮದ್ವೇ ಮಾಡ್ಕೊಂಡೆ. ಈಗ ತಿರುಗಿ ಅವಸರ ಬಿದ್ದು ಬಯ್ಯೋಕಾರಂಭಿಸಿದೆ. ಅಲ್ಲಾ, ಇದೇನ್ದೊಡ್ಡ ವಿಷಯಾಂತ ಇಷ್ಟು ಚಿಂತಿಸ್ಬೇಕು. ಜೀವನಾಂಶ ಕೊಟ್ಟು ಈ ಹೆಂಡ್ತೀನ ಬಿಟ್ಟು ಬಿಡೋದು, ಬೇರೊಂದು ಅಣಿಯಾಗಿರೋ ಕಡೇಲಿ ನೋಡಿ ಮದ್ವೇ ಮಾಡಿಕೊಳ್ಳೋದು.

**ಶೇಷಗಿರಿ**— ಗಂಗೂ, ಶುದ್ಧ ಹುಡುಗನ ಹಾಗೆ ನೀನು ಮಾತಾಡ್ತಿ. ನನ್ನ ಹೊಟ್ಟೇಲಿ ಉರೀತಿರೋ ಬೆಂಕಿ ಆ ಪರಮೇಶ್ವರನಿಗೇ ಗೊತ್ತು-ಮದ್ವೇಂತೆ ಮದ್ವೇ-ಈಗಾಗಿರೋದು ದೈವಾನುಗ್ರಹದಿಂದ ತಪ್ಪಿದ್ರೆ ಸಾಕಲ್ಲಪ್ಪಾಂತ ನಾನ್ಯೋಚಿಸ್ತಿದ್ದೆ. ಈ ಮದ್ವೇ ಬಲೇಗೆ ಬಿದ್ದೇ ನನ್ನ ಬಾಳು ಹೀಗಾದ್ದು-ನೀನೂ ಕೂಡ ಹಾಸ್ಯ ಮಾಡ್ಕೊಂಡು ನಗೋ ಹಾಗಾದ್ದು-ಊ-ಸ್ವಯಂಕೃತಾಪರಾಧಕ್ಕೆ ಯಾರನ್ನೇಕೆ ದೂಷಿಸ್ಲಿ-ಮುಖ್ಯ ನನ್ನ ಹಣೇಬರಹ.

**ಗಂಗಾಧರ**— ನಿನ್ಮನಸ್ನೋಯಿಸ್ಬೇಕೊಂತ ನಾನು ಹೇಳ್ಲಿಲ್ಲ-ದೊಡ್ಡಪ್ಪಾ-ಕ್ಷಮಿಸು. ನೋಡು, ನಿನ್ನ ಬಿಟ್ಟು ನನಗೆ, ನನ್ನ ಬಿಟ್ಟು ನಿನಗೆ ಬೇರೆ ಆಪ್ತರು ಯಾರಿದ್ದಾರೆ. ಎಲ್ಲಾರ್ನೂ ಕಳ್ಕೊಂಡು ನೀನು ಅನಾಥನಾದೆ. ಎಲ್ಲಾರ್ನೂ ಕಳಕೊಂಡು ನಾನು ತಬ್ಬಲಿಯಾದೆ. ನಿನ್ನ ದುಃಖನಿವಾರಣೆಯಾಗಿ ಎಂದಿನಂತೆ ನೀನು ಸುಖವಾಗಿರ್ಬೇಕೂ ಅನ್ನೋ ಆಸೆ ನನಗಿಲ್ವೇ ದೊಡ್ಡಪ್ಪ.

**ಶೇಷಗಿರಿ**— ನನ್ನ ಕಂದಾ, ಬೆಂದ ದೇಹಕ್ಕೆ ಅಮೃತ ಹಾಕ್ದಹಾಗೆ ಅಂದ್ಯಲ್ಲಪ್ಪಾ ಗಂಗೂ, ನಿನ್ನ ವಿಚಾರ್ದಲ್ಲಿ ನಾನು ಬಹಳ ಅನ್ಯಾಯ ಮಾಡಿದ್ದೀನಿ. ಒಂದು ದಿನಾನೂ ನಿನ್ನ ಅಪ್ಪ ಅಣ್ಣಾ ಅಂದು, ನೀ ಕೇಳಿದ್ದು ಕೊಟ್ಟು ನಿನ್ನ ಸಂತೋಷಾನ ಆಶಿಸ್ಲಿಲ್ಲ. ನಿನಗ್ಮದ್ವೇ ಮಾಡಿ, ನೀನೂ ನಿನ್ನ ಹೆಂಡತೀ ಸಂಸಾರ ಮಾಡ್ಕೊಂಡಿರೋದ ನೋಡ್ತಾಯಿದ್ರೆ ನನಗ್ಯಾಕೀಗೋಳು ಬರ್ತಿತ್ತು. ನಾನು ಏನ್ಹೇಳಲಿ ಗಂಗೂ, ಅಜ್ಞಾನ ಕವಿದು ಈ ಮದ್ವೇ-ರಾಶಿರಾಶಿ ಅಪಮಾನ -ಎರಡೂ ನನ್ನ ಸ್ವಯಾರ್ಜಿತ ಸ್ವತ್ತುಗಳಾದ್ವು. ಎಲ್ಲಾ ಆ ಹಾಳು ಅವಧಾನೀ ಮೋಸ ! ಮೊದಲೇ ನನಗವನು ತನ್ನನುಭವ ತಿಳಿಸಿ ಪ್ರಯತ್ನ ಬೇಡಾಂದಿದ್ರೆ ಈ ಹವ್ಯಾಸಕ್ಕೆ ಕೈಯೇ ಹಾಕ್ತಿರ್ಲಿಲ್ಲ-ದುಡ್ನಾಸ್ಗೆ ನನಗ್ಮೋಸಮಾಡಿ ನನ್ನ ಮಾನ ಮರ್ಯಾದೆಯೆಲ್ಲಾ ಬೈಲಿಗೆಳೆದು ಈ ರೀತಿ ನನ್ನ ಸ್ಥಿತಿ ಮಾಡಿಟ್ಟ ಗಂಗೂ-ಅವನು ಸಿಕ್ಕಲಿ ಮಾಡ್ತೇನೆ.

**ಗಂಗಾಧರ**—ಸುಮ್ಮನೆ ಎಲ್ಲಾದಕ್ಕೂ ಅವಧಾನೀನ ಯಾತಕ್ಕೆ ಬಯ್ಬೇಕು ದೊಡ್ಡಪ್ಪಾ. ನೀನು ಒಪ್ಪಿಗೆ ಕೊಡ್ದಿದ್ರೆ ಅವನು ಪ್ರೋತ್ಸಾಹ ಕೊಡ್ತಿದ್ನೆ.

[ತೆರೆಯೊಳಗೆ **ಬೋರ**— ಚಂಜೆಗ್ಬನ್ನಿ ಬುದ್ದಿ ಈಗ್ಬೇಡಾ-ರಾಯ್ರು ಚಿಕ್ಕಬುದ್ಯೋರಪತ್ರ ಏನೋ ಪರ್ಸಂಗಮಾಡ್ತಾ ಅವರೆ. ನನ್ಮಾತು ಕೇಳೀ ನಮ್ಮಪ್ಪಾ-ಈಗ್ಬ್ಯಾಡಾ-]

**ಅವಧಾನಿ**— ನಡೆಯೋ ನಡೆಯೋ, ನನಗೆಂಥಾ ಅಡಚಣೆ. ನಾನು ಯಾವಾಗ್ಬಂದ್ರೂ, ಏನಾದ್ರೂ ನೆವಹೇಳಿ ಅಟ್ತಾಲೇ ಇರ್ತ್ತ. ಇರಲೀ–ನಾನೇ ಹೋಗಿ ನೋಡ್ತೀನಿ (ಅವಧಾನಿ ಪ್ರವೇಶಿಸುವನು)

**ಅವಧಾನಿ**— (ಶೇಷಗಿರಿರಾಯನನ್ನು ನೋಡಿ) ರಾಯರೇನೋ ಬಹಳ ಯೋಚನೆಮಾಡ್ತಾಯಿರೋ ಹಾಗಿದೆ. ಯೋಚನೆಯಾಕೆ ಸ್ವಾಮಿ– ಯೋಚನೆ ಮಾಡೋ ಕಾಲವೆಲ್ಲಾ ಮುಗೀತಲ್ಲಾ

**ಶೇಷಗಿರಿ**— (ಕತ್ತೆತ್ತಿ ನೋಡಿ) ಯಾರು, ಅವಧಾನೀನೇ, ಅಯ್ಯೋ! ಮನೆಹಾಳಾ!– ಪುನಃ ಬಂದ್ಯಾ–ನನ್ನ ಮನೆ ಮುಳುಗ್ಸಿ ಬಿಟ್ಟೆಲ್ಲೋ ನನಗ್ಯಾಕೋ ಸಾಮಾಡೀ ಮಾಡಿ. ಹಣಾ ಎಳ್ಕೊಂಡು ಎಳ್ಕೊಂಡು ನಿನ್ನ ಹಾಳು ಹೊಟ್ಟೆ ತುಂಬ್ಕೊಂಡ್ಯಲ್ಲೋ ನೀಚಾ–ದ್ರೋಹೀ–

**ಅವಧಾನಿ**— (ಆಶ್ಚರ್ಯಚಕಿತನಾಗಿ) ಇದೇನು ಹೀಗಾಗಿದೆ ರಾಯರಿಗೆ ಮೈಯಲ್ಲಿ ಸ್ವಸ್ಥವಿಲ್ವೇನೋ! ಅಯ್ಯೋ ಪಾಪವೇ, ಇದೇನಪ್ಪಾ ಗ್ರಹಚಾರ ಬರೋಕಾಲಕ್ಕೆ ಹೀಗೇನೇ. ಮದುವೆ ಹುಚ್ಚು ಹೋಗಿ ನಿಜವಾದ ಹುಚ್ಚೇ ಹಿಡಿದುಬಿಡ್ತು

**ಶೇಷಗಿರಿ**— ಪಾಪೀ, ನನಗೆ ಹುಚ್ಚು ಹಿಡೀತೂಂತೀಯಾ. ನನಗೆ ಹುಚ್ಚು ಹಿಡಿಸ್ದೋನು ನೀನೇ–ಈಗ ಅಪಹಾಸ್ಯಮಾಡ್ಕೊಂಡು ನಗೋನೂ ನೀನೇ–ನಿನ್ನ ಇವತ್ತು ಭೂಗತಮಾಡಿಬಿಡ್ತೀನೆ– ಚಂಡಾಲ, ಗ್ರಹಚಾರ, ನನಗೋ ನಿನಗೋ ನೋಡೋಣ (ಹೊಡೆಯಲು ಹೋಗುವನು. ಗಂಗಾಧರನೂ ಬೋಧನೂ ಹಿಡಿದುಕೊಳ್ಳುವರು)

**ಅವಧಾನಿ**— ಒಳ್ಳೇ ಪ್ರಾಣಸಂಕಟ ಬಂತಲ್ಲಾ. ಇದೇನು ಹುಚ್ಚೋ, ಬೆಪ್ಪೋ, ಶಿವಲೀಲೆಯೋ ಒಂದೂ ಗೊತ್ತಾಗ್ಲಿಲ್ಲ. ಎಂದೂ ಇಲ್ಲದ್ದು ಇವತ್ತು ನನ್ನಮೇಲೆ ತಿರುಗ್ಬಿದ್ದಿದ್ದಾರಲ್ಲಾ–ಇರಲಿ– (ಪ್ರಕಾಶ) ರಾಯ್ರೇ ರಾಯ್ರೇ–ಸಮಾಧಾನ ತಂದ್ಕೊಳ್ಳಿ–ಯಾತಕ್ಕೆ

ಬಡವನಮೇಲಿಷ್ಟು ಆಗ್ರಹ-ನಾನು ನಿಮಗೆ ಮಾಡಿದ ಅನ್ಯಾಯ ವಾದರೂ ಏನು ?

**ಶೇಷಗಿರಿ**-- ಅನ್ಯಾಯವೇ ಅನ್ಯಾಯವೆ ! ಇದಕ್ಕಿಂತಲೂ ಇನ್ನು ಅನ್ಯಾಯಬೇಕೇ-ನನ್ನ ದುಡ್ಡೆಲ್ಲಾ-ಮೈಲಿರೋ ರಕ್ತಾನೆಲ್ಲಾ ಬಸಿದು, ಕಾಸಿಕ್ಕಾಸು ಗಂಟುಹಾಕಿ ಸಂಪಾದ್ಸಿದ ದುಡ್ಡೆಲ್ಲಾ-ಅನಾಯಾಸವಾಗಿ ಎಳೆದೆಯಲ್ಲಾ-ಯಾವದೋ ಒಂದು ಕಾಡು ಮಂಗಾನ ತಂದು, ಮದ್ವೇಂತ ಮಾಡಿ ಕಟ್ಟಿ ಊರ್ನಲ್ಲಿ ನಾನು ಮುಖ ಎತ್ಕೊಂಡು ತಿರುಗದಹಾಗೆ ಮಾಡ್ಬಿಟ್ಯಲ್ಲೋ ನನ್ನ ಮರ್ಯಾದೆ-ಘನತೆ-ನನ್ನ ವಂಶಗೌರವ ಎಲ್ಲಾ-ಮನೆಹಾಳಾ-ಭಸ್ಮಮಾಡ್ಬಿಟ್ಯಲ್ಲೋ. ಇದಕ್ಕಿಂತಾ ಇನ್ನೇನುಬೇಕು.

**ಅವಧಾನಿ**— (ಕುಪಿತನಾಗಿ) ಸುಮ್ನೆ ನನ್ನಮೇಲೆ ಬಿದ್ದು ಬಡ್ಕೊಂಡ್ರೆ ಏನೂ ಸಾರ್ಥಕವಿಲ್ಲಾ ಸ್ವಾಮಿ-ನೀವು ಕುಣಿದಾಡಿ ಕುಪ್ಪಳಿಸಿ ದಿನಕ್ಕೆಪ್ಪತ್ಸಲ ನುನೆಬಾಗಿಲ್ಗೆ ಬೋರನ್ನಟ್ಟಿ ನನ್ನ ಕರ್ಕೊಳ್ಳಿದ್ದೀಯಿದ್ರೆ ನಾನೇನು ಬರ್ತಿದ್ನೇನು ? ಬೇಕಾಗುವಾಗೆಲ್ಲಾ ಹಾರಾಡಿದ್ರಿ ಈಗ ನನ್ನ ಮೇಲೆ ಬಿದ್ದು ಬಡ್ಕೋತೀರಿ. ಚೆನ್ನಾಗಿದೆ ಸ್ವಾಮಿ ಚೆನ್ನಾಗಿದೆ. ಮರ್ಯಾದಸ್ಥರು ಮಾಡೋ ಕೆಲ್ಸಾ ಅಲ್ಲಾ ಇದು.

**ಶೇಷಗಿರಿ**— ಮಾಡಿದ್ತಪ್ಪು ಮುಚ್ಚಿಕೊಳ್ಳೋಕೆ ನನ್ನೇ ಬಯ್ಯೋಕಾರಂಭಿಸಿದ್ಯಾ ನೀನು-ನೀನು, ಆಗ ಬೇಡಾಂದು. ಪ್ರಯತ್ನ ನಿಲ್ಲಿಸಿದ್ರೆ ಇಷ್ಟಕ್ಕೆಲ್ಲಾ ಯಾಕವಕಾಶವಾಗ್ತಿತ್ತು ? (ನಂಜಮ್ಮ ಗಾಬರಿಯಿಂದ ಪ್ರವೇಶಿಸುವಳು) ಏನೇ ಯಾಕ್ಬಂದೆ ಇಲ್ಲಿ? ಏನಿದೆ ನೋಡೋಕ್ಕ ಮಾಷೆ-ನಡೀಯಾಚೆ ಮುದಿರಂಡೇ—

**ನಂಜಮ್ಮ**-- ಏನೂಯಿಲ್ಲ-ನಿಮ್ಮ ಕುಟುಂಬ

**ಶೇಷಗಿರಿ**— ಏನು ಹೊಡ್ಕೊತಾಲೇಬಂದೆ-ಹೇಳು, ನಮ್ಕುಟುಂಬದ ಗತಿಯೇನಾಯ್ತು-

**ನಂಜಮ್ಮ**— ಈ ಗಲಾಟೇನ ತಡೆಯೋಕೆ ಅವರ ಕೈಲಾಗೋದಿಲ್ವಂತೆ. ಮನೆಬಿಟ್ಟು ಹೊರಟುಹೋಗ್ತಾರಂತೆ. ಸೀರೇಕುಪ್ಸಾಯೆಲ್ಲಾ ಟ್ರಂಕಿಗೆ ಹಾಕ್ತಿದ್ರು-ನಾನು ಬ್ಯಾಡಾಂದೆ-ಕೇಳಲಿಲ್ಲ.

**ಶೇಷಗಿರಿ**— ಏನು! ಹೊರಟು ಹೋಗ್ತಾಳ್ಯೆ. ಇನ್ನು ಊರೋರ್ಗೆಲ್ಲಾ ಬಿತ್ತಾಳಲ್ಲಪ್ಪಾ. ಅಯ್ಯೋ, ಏನುಮಾಡ್ಲೀ ದೇವ್ರೇ (ತಲೆಚಚ್ಚಿಕೊಳ್ಳುವನು)

**ಗಂಗಾಧರ**— ಸಮಾಧಾನತಂದ್ಕೊಳ್ಳಿ ದೊಡ್ಡಪ್ಪಾ. ಇದಕ್ಕೇನಾದ್ರೂ ಉಪಾಯ ಮಾಡೋಣ. ಸುಮ್ನೆ ಕೂಗಾಡಿ ಮನೆಯೆಲ್ಲಾ ರಂಪ ಎಬ್ಸಿಬಿಟ್ರೆ ಊರೋರೆಲ್ಲಾ ಬಂದುಬಿಡ್ತಾರೆ

**ಶೇಷಗಿರಿ**— ಗಂಗೂ, ಏನು ಸಾಧ್ಯ ಗಂಗೂ, ಕೆಲಸ ಕೈಮೀರಿ ಹೋಗಿದೆ-ಎಲ್ಲಾ ಆ ಮನೆಹಾಳನಿಂದ. ಗಂಗೂ, ನಿನ್ನಲ್ಲಿ ಅವಳಿಗೆ ತುಂಬಾ ಗೌರವ. ನೀನು ಹೋಗಿ ಬೇಡಾಂತ ಹೇಳಬಾರದೇ?

**ಗಂಗಾಧರ**— ಅಗತ್ಯವಾಗಿ ಹೇಳ್ತೀನೆ ದೊಡ್ಡಪ್ಪಾ. ಅದಕ್ಕೂ ಹೆಚ್ಚಿಗೆ ಮಾಡ್ತೇನೆ-ಈ ತೊಂದರೇಯಿಂದ ನಿನ್ನ ಸಂಪೂರ್ಣವಾಗಿ ವಿಮೋಚನೆ ಮಾಡ್ತೀನೆ.

**ಶೇಷಗಿರಿ**— ಸಾಧ್ಯವೇ, ಗಂಗೂ-ನೀನು ನಿಜಾಹೇಳ್ತಾಯಿದ್ದೀಯಾ? ಗಂಗೂ ವಿಮೋಚನೆ ಸಾಧ್ಯವೇ?

**ಗಂಗಾಧರ**— ಸಾಧ್ಯ ದೊಡ್ಡಪ್ಪಾ. ಆದರೆ ತಪ್ಪಿತಸ್ಥರನ್ನು ನೀನು ಕ್ಷಮಿಸೋಹಾಗಿದ್ರೆ-

**ಶೇಷಗಿರಿ**— ಎಲ್ಲಾರ್ನೂ ಕ್ಷಮಿಸ್ತೀನೆ ಗಂಗೂ ಆದರೆ (ಅವಧಾನಿಯನ್ನು ತೋರಿಸಿ) ಈ ಚಂಡಾಲನ್ನ ಮನೆ ಮಠ ಇಲ್ದ ಭಿಕಾರಿ ಮಾಡ್ದೇಯಿದ್ರೆ............

**ಅವಧಾನಿ**— (ಭೀತನಾಗಿ) ಸ್ವಾಮಿ, ನಾನ್ಮಾಡಿದ್ದು ಶತಾಪರಾಧ

ವಾಯ್ತು. ದೊಡ್ಡಮನಸ್ಮಾಡಿ ಕ್ಷಮಿಸ್ಬೇಕು. ಇನ್ಮೇಲಿಂಥಾ ಹವ್ಯಾಸಕ್ಕೆ ಕೈಹಾಕಲ್ಲ. ಬಡವನಮೇಲೆ ಹಿಂದಿನ ಅಭಿಮಾನ ಯಿಟ್ಟು ಕಾಪಾಡ್ಬೇಕು ತಿಳೀದೇ ಮಾಡಿದ ತಪ್ಪು.

**ಶೇಷಗಿರಿ**— ಕ್ಷಮಿಸೋಕೆ ನಾನು ಯಾರು? ದೇವರ್ನ ಕೇಳ್ಕೊಳ್ಳಿ— ಗಂಗೂ–ಇವನನ್ನೂ ಕ್ಷಮಿಸ್ತೀನೆ. ಅದೇನು ಬೇಗ ಹೇಳು....ಸದ್ಯ ಆ ಶನಿತೊಲಗಿದ್ರೆ – ಬೇಗ ಹೇಳು ನಿನ್ನ ದಮ್ಮಯ್ಯ. ತಡಾ ಮಾಡಬೇಡ.

**ಗಂಗಾಧರ**— ಹಾಗಾದ್ರೆ ನೀನು ಕೋಪ ಮಾಡ್ಕೋಳೋದಿಲ್ಲವಷ್ಟೇ

**ಶೇಷಗಿರಿ**— ಇಲ್ಲಾ ಗಂಗೂ, ದೇವ್ರಾಣೆ ಮಾಡ್ಕೋಳೋದಿಲ್ಲ.

**ಗಂಗಾಧರ**— ಸರಿ (ಚಪ್ಪಾಳೆ ತಟ್ಟುವನು- ಲಲಿತೆ ಬಂದು ನಿಲ್ಲುವಳು) ಇವಳೇ ನಿಮ್ಮ ಹೆಂಡತಿ. (ಲಲಿತೆ ಸ್ತ್ರೀಭೂಮಿಕೆ ತೆಗೆದುಹಾಕಿ ಮಾಧುವಾಗುವಳು)

**ಶೇಷಗಿರಿ**— (ಆಶ್ಚರಿಯಿಂದ) ಹಾಗಾದರೆ ಲಲಿತೆಯಲ್ಲ–ಆ ರಾಕ್ಷಸಿ ಯಲ್ಲ – ಆ ಹೆಮ್ಮಾರಿಯಲ್ಲ–ನಾನು ಬದ್ಕಿದೆ – ಗಂಗೂ ನಾನು ಧನ್ಯನಾದೆ (ಮೂರ್ಛಿತನಾಗುವನು–ಗಂಗಾಧರ, ಕಿಟ್ಟು ಶುಶ್ರೂಷೆ ಮಾಡುವರು. ಮೂರ್ಛೆ ತಿಳಿದೆದ್ದು) ಗಂಗೂ, ಇದೆಲ್ಲಾ ಯಾರ ತಂತ್ರ. ನಮ್ಮ ದಾಯಾದಿಗಳು ಯಾರೋ ಸೇರಿ ಮಾಡಿರಬೇಕು. ನನಗವಮಾನವಾದೀತೇಂತ ಕಾದಿದ್ರೂ. ಹೋಗಲಿ–ಯಾರಾದ್ರೇನು–ನನಗ್ಬುದ್ಧಿ ಕಲಿಸಿದ್ರು. ಅನ್ಯಾಯವಾಗಿ ಒಬ್ಬ ಬಡ ಹುಡುಗಿ ತಲೇಮೇಲೆ ಕಲ್ಲೆತ್ತಿ ಹಾಕ್ತಿದ್ದದ್ನ ತಪ್ಪಿಸಿದ್ರು.

**ಕಿಟ್ಟು**— ಸ್ವಾಮಿ, ತಮ್ಮ ತಪ್ಪು ತಿಳಿಯಲೆಂದೇ ನಾವೀ ರೀತಿ ಮಾಡಬೇಕಾಯಿತು. ಸಕಾಲದಲ್ಲಿ ತಮ್ಮ ದೋಷ ತಿಳಿಯ ಬಂದದ್ದು ಬಹಳ ಸಂತೋಷ. ನಾವು ಮಾಡಿದ್ದು ತಪ್ಪಾಗಿದ್ರೆ ದಯವಿಟ್ಟು ಕ್ಷಮಿಸಿ. ನೀವು ನಿಜ್ವಾದ ಹುಡಿಗೀನೇ–ಪಟ್ಟ

ವಾಸದ ಹುಡುಗೀನೇ ಮದ್ವೆ ಮಾಡ್ಕೊಂಡಿದ್ರೆ ಇನ್ನೂ ಎಷ್ಟೆಷ್ಟೋ ಮಾತು ಕೇಳ್ಬೇಕಾಗ್ತಿತ್ತು.

**ಶೇಷಗಿರಿ**— ಮಗೂ, ನೀವ್ಯಾರೂ ದೋಷಿಗಳಲ್ಲ. ನೀವು ನಿಜ್ವಾಗ್ಲೂ ನನಗೊಂದು ದೊಡ್ಡ ಉಪಕಾರಾನೇ ಮಾಡಿದ್ರಿ. (**ಮಾಧೂಗೆ**)- ನಿನ್ನ ಪಾತ್ರ ಬಹಳ ಚೆನ್ನಾಗಿ ಅಭಿನಯಿಸ್ದೆ ಮಗೂ. ಲಲಿತೆಯಾಗಿ ದ್ದೋನು ನೀನೇಯಂತ ತಿಳಿದಿದ್ರೂ ಇನ್ನೂ ಎದೆಗುಂಡಿಗೆ ಹೊಡ್ಕೊತ್ತಾಲೇ ಇದೆ. ಹೀಗೆ ಒಳ್ಳೇ ಕೆಲಸಗಳ್ನೇ ಮಾಡಿ ಹೆಸರ್ವಾಸಿಯಾಗಿ ಬಾಳು. ಸ್ನೇಹಕ್ಕಾಗಿ ಮಾನ ಕೂಡ ಮರ್ತ ನಿನ್ನ ವರ್ತನವೇ ಲೋಕಕ್ಕೊಂದು ಮಾದರಿಯಾಗಲಿ; ನೀನು ಬಯ್ತಾ ಬಯ್ತಾ ನನಗ್ಬುದ್ಧಿ ಚೆನ್ನಾಗಿ ಬಂದು ವಯಸ್ಸಾದಮೇಲೆ ಮದ್ವೇಯಾಗೋರು ಶುದ್ಧ ಹುಚ್ಚರೂಂತ ಗೊತ್ತಾಯಿತು. ಈಗ್ನಾಡಿರೋ ಪಾಪಕ್ಕೆಲ್ಲಾ ನಿವಾರಣೋಪಾಯ ಹುಡ್ಕೋ ದೊಂದೇ ಇನ್ನು ಮೇಲೆ ನನ್ನ ಹವ್ಯಾಸ-ಮದ್ವೇ ಹಗರಣದಿಂದ ಅವಮಾನವೂ ಆಗಿದೆ-ಊರ್ನಲ್ಲಿ ಮುಖ ಎತ್ಕೊಂಡು ತಿರುಗೋದು ಹಾನೇ ಹ್ಯಾಗೆ. ನಾನು ನಾಳೇನೇ ಕಾಶೀ ರಾಮೇಶ್ವರ ಪ್ರಾಂತ್ಯ ಯಾತ್ರೆ ಹೊರಡ್ತೀನಿ. ನೀನೇನೂ ಯೋಚನೆ ಮಾಡ್ಬೇಡಾ ಗಂಗೂ–

**ಗಂಗಾಧರ**— ಚಿಂತಿಸ್ಬೇಡ ದೊಡ್ಡಪ್ಪ. ಅವಮಾನವೇನೂ ಆಗಿಲ್ಲ. ಎಲ್ಲಾ ಗುಟ್ಟಾಗಿ ಅವಧಾನಿಗಳು ಜರುಗಿಸಿಬಿಟ್ಟಿದ್ದಾರೆ. ಇನ್ನು ಅವರ ಮರ್ಯಾದೆಗಾಗಿ ಮಠಕ್ಕೆ ಕಾಗದ ಬರೆಯೋಣ- ಬೋರ, ನಂಜಮ್ಮ ಇವರ ವಿಚಾರ ನನಗ್ಬಿಡು.

**ಶೇಷಗಿರಿ**— ಎಲ್ಲಾ ನಿಂಗೇ ಬಿಟ್ಟಿದ್ದೇನೆ ಗಂಗೂ. ಈವತ್ತಿನಿಂದ ಮನೆಗೆ ನೀನೇ ಯಜಮಾನ. ನಿನ್ನ ಗುಣಕ್ಕೆ ನಾನೇನು ಕೊಡಬಲ್ಲೆ ಗಂಗೂ. ನನ್ನ ಹಿಂದಿನ ನಡವಳಿಕೆಯೆಲ್ಲಾ ಕ್ಷಮಿಸು. ಈ ಅಲ್ಪ ಸ್ವಲ್ಪ ಆಸ್ತೀನೇ ರೂಢಿಸಿಕೊಂಡು ಸುಖವಾಗಿರಪ್ಪಾ. ರೈತರೂಂದ್ರೆ

ನಿಮ್ಮಪ್ಪ ಪ್ರಾಣ ಬಿಡ್ತಿದ್ದ-ನೀನೂ ಹಾಗೇ ಇದ್ದೀಯಾ-ಆ ಬೋರಂಗೆ ನಾನ್ಮಾಡಿರೋ ಅನ್ಯಾಯಾನ ಸರಿಮಾಡು, ನಂಜ ಮ್ಮೋರ್ಗೆ ಒಂದಿನ್ನೂರು ರೂಪಾಯಿಕೊಡು. ಸಬ್‌ರಿಜಿಸ್ಟ್ರಾರು ಊರಲ್ಲಿದ್ದಾರ್ಯೆ ವಿಚಾರಿಸು. (ನಿಷ್ಕ್ರಮಿಸುವನು)

**ಅವಧಾನಿ**— (ಗಂಗಾಧರನ ಬಳಿಗೆ ಬಂದು) ಅಯ್ಯಾ, ನಿಮ್ಮ ವಿಚಾರದಲ್ಲಿ ನಾನು ತೋರ್ಸಿದ ವರ್ತನೆ ಕ್ಷಮಿಸಿ ಕಾಪಾಡ್ರಪ್ಪಾ. ಸಂಸಾರವಂದಿಗ. ಮಠಗಿಠಕ್ಕೆ ಬರೆಯೋಕೆ ಹೋಗಬೇಡಿ. ಈಗಾಗಿರೋ ಛೀಮಾರೀನೇ ಸಾಕಾಗಿದೆ. ಗ್ರಹಚಾರವಶಾತ್ ಕೆಟ್ಟ ಬುದ್ಧಿ ಹುಟ್ಟಿತು.

**ಗಂಗಾಧರ**— ಅವಧಾನಿಗಳೇ, ಇದಕ್ಕೆಲ್ಲಾ ನಾನು ಒಂದು ಬೊಂಬೆ ಸಮಾನ. (ಕಿಟ್ಟುವನ್ನು ತೋರಿಸಿ) ಸೂತ್ರಧಾರರಲ್ಲಿದ್ದಾರೆ ನೋಡಿ-ಅವರ ಕ್ಷಮೆ ಕೇಳ್ಕೊಳ್ಳಿ.

**ಅವಧಾನಿ**— (ಸ್ವಲ್ಪ ಹೊತ್ತು ಚಿಂತಿಸಿ) ಸ್ವಯಂಕೃತಾಪರಾಧಕ್ಕೆ ಅನುಭವಿಸಿಯೇ ತೀರಬೇಕು. ಅಯ್ಯಾ, ಎಲ್ಲಾ ತಿಳ್ದೋನು ನೀನು-ನಿನಗೆ ಹೆಚ್ಚಿಗೆ ಏನು ಹೇಳಲಪ್ಪಾ? ನಾನು ಮಾಡಿದ ಮಣ್ಣು ತಿನ್ನೋ ಕೆಲಸ ಕ್ಷಮಿಸಿ ಕಾಪಾಡಪ್ಪಾ-ನೀನು ಚಿಕ್ಕೋ ನಾದ್ರೂ ನಿನ್ನ ಪಾದಾ ತೊಳೆಯೊ ಯೋಗ್ಯತೆ ಕೂಡ ನನ್ನಲ್ಲಿಲ್ಲ (ಕಾಲಿಗೆರಗುವನು)

**ಕಿಟ್ಟು**— (ವಿಶ್ವಾಸದಿಂದ ಹಿಡಿದೆತ್ತಿ) ಅವಧಾನಿಗಳೇ, ಏನು ಅರಿಯದ ಹುಡುಗಿಯೊಬ್ಬಳನ್ನು ಬಲತ್ಕಾರದಿಂದ ರಾಯರಿಗೆ ಮದುವೆ ಮಾಡಿಸುವುದಕ್ಕೆ ಮುಂಚೆ ಅದರ ಯುಕ್ತಾಯುಕ್ತತೆ ಯನ್ನಾಗಲೀ ಪರಿಣಾಮವನ್ನಾಗಲೀ ವಿವೇಚನೆ ಮಾಡಿದಿರಾ? ವೃದ್ಧರೂ ಜೀರ್ಣಕಾಯರೂ ಆದ ರಾಯರಿಗೆ ಸುಂದರಿಯೂ, ತರುಣಿಯೂ ಆದ ಕನ್ಯೆಯೊಡನೆ ಮದುವೆಯೇ? ಹಣದಾಸೆ

ಹಣಕ್ಕೆ ಹೆಣ್ಣನ್ನು ಕೊಡುವ ಮಾತಾಪಿತೃಗಳಾದ ನೀವು ಅವರ ವೈಧವ್ಯದ, ಹೃದಯಭೇದಕ ಆರ್ತನಾದವನ್ನು ಕೇಳುತ್ತಿಲ್ಲವೇ? ಹೆಣ್ಣುಮಕ್ಕಳೆಂದರೆ ವಿಕ್ರಯದ ವಸ್ತುಗಳೇ? ಅವರಿಗೇನು ಆತ್ಮವಿಲ್ಲವೇ; ವಿವೇಕವಿಲ್ಲವೇ? ಸದಾ ನಿಮ್ಮ ಸೇವೆಮಾಡಿ, ನಿಮ್ಮ ಕಿಂಚಿತ್ತಾದ ಆಸೆಯೇ ಆಜ್ಞೆಯೆಂದು ಭಾವಿಸುವ ಆ ನಿರಪರಾಧಿ ಕಂದಗಳಿಗೆ ನೀವು ಮಾಡುವ ಉಪಕಾರವಿದೇಯೋ? ಆರ್ಯ ಋಷಿ ಕುಲಜರಾದ ನೀವು ದುರ್ಮಾರ್ಗದಲ್ಲಿ ಹರಿಸುತ್ತಿರುವ ಈ ಬುದ್ಧಿವೈಖರಿಯನ್ನು ದೇಶಕ್ಕೆ ಹಿತಸಾಧಕವಾದ ಮಾರ್ಗಗಳಲ್ಲೇಕೆ ಉಪಯೋಗಿಸಬಾರದು? ಹಿರಿಯರ ಆಚರಣೆಯೇ ಹಿರಿದೆಂದು ಭಾವಿಸುತ್ತಿರುವ ಕಿರಿಯರಾದ ನಮಗೇಕೆ ಮಾರ್ಗದರ್ಶಿಗಳಾಗಬಾರದು? ಅವಧಾನಿಗಳೇ, ಹಿಂದೂ ಸಮಾಜ ಹಾಳಾಗಿ ಹೋಗುತ್ತಿದೆ. ಸಮಾಜದ ಮುಂದಾಳುಗಳಾದ ನೀವುಗಳಿಷ್ಟೊತ್ತು ಆರ್ಯಧರ್ಮದ ಪುನರುದ್ಧಾರಕ್ಕೆ ಕಂಕಣಬದ್ಧರಾಗದಿದ್ದರೆ ಹಿಂದೂ ಧರ್ಮವೆಂಬ ಹೆಸರೇ ತೊಡೆದು ಹೋಗುವುದರಲ್ಲಿ ಸಂದೇಹವಿಲ್ಲ.

**ಅವಧಾನಿ**— ಈ ವಿಷ್ಯ ಹೀಗೆ ನಾನು ಯೋಚನೆ ಮಾಡಿರಲಿಲ್ಲ. ಕಿಟ್ಟೋ, ಹಾಗಾದರೆ, ನನ್ನ ಧರ್ಮ, ನನ್ನ ಬಾಳು, ನನ್ನ ಡಬಡ್ಡಾಳಿಕೆ ಎಲ್ಲಾ ಶುದ್ಧ ಮೋಸವೇ? ನನ್ನನ್ನೇ ನಾನು ಮೋಸ ಮಾಡ್ಕೊಳ್ತಿದ್ನೆ, ಅಯ್ಯೋ! ಸನಾತನ ಧರ್ಮವೇ. ನನ್ನಂಥ ನೀಚನಿಗೆ ನೀನು ಜನ್ಮ ಕೊಟ್ಟೆಯಲ್ಲಾ! ಅದಕ್ಕೆ ದೇವರು ನನಗೆ ತಕ್ಕ ಶಾಸ್ತಿ ಮಾಡಿರೋದು. ಸುಬ್ಬು ಅಂಥ ಮಗನ್ನ ಭಾಗೀರಥಿಯಂಥಾ ಹೆಂಡ್ತೀನ ಕೊಟ್ಟಿರೋದು. ಮಾಡಿದ್ದುಣ್ಣೋ ಮಾರಾಯಾಂತ ಹಿರಿಯರು ಹೇಳಿದ್ದು ನಿಜಾಲ್ವೆ!

**ಮೋರ** — ಬುಡಿಬುದ್ದಿ ಏನ್ಯೋಚಿಸ್ತೀರಾ. ಮನುಸ್ರಾಗಿ ಹುಟ್ಟಿದ ಮ್ಯಾಕೆ ಎಲ್ಲಾರೂ ತಪ್ಪು ಮಾಡೇಮಾಡ್ತಾರೆ. ಅಂಥಾ ಸತ್ಯವಂತ ಧರ್ಮರಾಯ ನಮ್ಮಪ್ಪ ಯಾರವನೆ ಈ ಲೋಕದಾಗೆ. ಇನ್ಮ್ಯಾಕೆ